# ದುರಾಸೆ
# ವಿನಾಶಕಾರಿ ಕೆಡುಕು

✍ ಬಿಂತುಲ್ ಇಸ್ಲಾಮ್

ಪರಮದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮನುಷ್ಯನ ದುರಾಸೆಗೆ ಇತಿಮಿತಿಯಿಲ್ಲ. ಎಷ್ಟು ಸಿಕ್ಕಿದರೂ ಅವನ ಹೊಟ್ಟೆ ತುಂಬುವುದಿಲ್ಲ. 'ಮನುಷ್ಯನಿಗೆ ಎರಡು ಕಣಿವೆ ತುಂಬಾ ಬಂಗಾರ ಸಿಕ್ಕಿದರೂ ಮೂರನೆಯದಕ್ಕಾಗಿ ಹಾತೊರೆಯುವನು. ಅವನ ಹೊಟ್ಟೆಯನ್ನು ಮಣ್ಣು ಮಾತ್ರ ತುಂಬ ಬಲ್ಲುದು' ಎಂದು ಪ್ರವಾದಿ ಮುಹಮ್ಮದ್(ಸ) ಹೇಳಿದ್ದಾರೆ. ಸಂಪತ್ತು ಶೇಖರಿಸುವುದರಲ್ಲಿ ತನ್ನ ಆಯುಷ್ಯವನ್ನೇ ಸವೆಸಿದರೂ ಅವನಿಗೆ ತೃಪ್ತಿಯುಂಟಾಗುವುದಿಲ್ಲ.

ದುರಾಸೆಯೇ ಮಾನವನ ಎಲ್ಲ ಕೆಡುಕುಗಳಿಗೂ ಮೂಲವಾಗಿದೆ. ದುರಾಸೆಯನ್ನು ಪ್ರವಾದಿಯವರು ತೋಳಕ್ಕೆ ಹೋಲಿಸಿದ್ದಾರೆ. ಹಸಿದ ತೋಳವು ಕುರಿ ಮಂದೆಯ ಮೇಲೆರಗಿದರೆ ಎಂತಹ ವಿನಾಶ ಸೃಷ್ಟಿಸಬಲ್ಲುದು ಎಂದು ಊಹಿಸಲಿಕ್ಕೂ ಸಾಧ್ಯವಿಲ್ಲ. ದುರಾಸೆಯೆಂಬ ತೋಳವು ಮಾನವನಲ್ಲಿ ಅನೇಕ ಕೆಡುಕುಗಳನ್ನು ಹುಟ್ಟು ಹಾಕುತ್ತದೆ. 'ದುರಾಸೆ ವಿನಾಶಕಾರಿ ಕೆಡುಕು' ಎಂಬ ಈ ಕೃತಿಯಲ್ಲಿ ಸುಮಾರು 25 ದುರ್ಗುಣಗಳನ್ನು ಎಣಿಸಲಾಗಿದೆ. ಅದರ ದುಷ್ಪರಿಣಾಮಗಳನ್ನು ವಿವರಿಸಲಾಗಿದೆ.

ದುರಾಸೆಯಿಂದ ಮನುಷ್ಯನನ್ನು ಕೇವಲ ದೇವಭಯ ಮತ್ತು ಪರಲೋಕದ ಪ್ರಜ್ಞೆಯು ರಕ್ಷಿಸಬಲ್ಲುದು. ಅದನ್ನು ಕುರ್‌ಆನ್ ಹದೀಸ್‌ಗಳ ಅಧ್ಯಯನದಿಂದ ಗಳಿಸಲು ಸಾಧ್ಯ. ಈ ಕೃತಿಯ ಅಧ್ಯಯನವು ಮಾನವನನ್ನು ಪ್ರಸ್ತುತ ಎಲ್ಲ ಕೆಡುಕುಗಳಿಂದ ಮುಕ್ತಗೊಳಿಸಲಿಕ್ಕೆ ಪ್ರೇರಕವಾಗಲಿ ಎಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ದುರಾಸೆಯ ಖಂಡನೆ: ಕುರ್‌ಆನಿನಲ್ಲಿ

أَلۡهَىٰكُمُ ٱلتَّكَاثُرُ حَتَّىٰ زُرۡتُمُ ٱلۡمَقَابِرَ

"ಹೆಚ್ಚು ಹೆಚ್ಚಾಗಿ ಮತ್ತು ಇತರರಿಗಿಂತ ಅಧಿಕವಾಗಿ ಸಂಪಾದಿಸುವ ಚಿಂತೆಯು ನಿಮ್ಮನ್ನು ಅನಾಸ್ಥೆಗೆ ಒಳಪಡಿಸಿ ಬಿಟ್ಟಿದೆ. ಕೊನೆಗೆ (ಇದೇ ಚಿಂತೆಯಲ್ಲಿ) ನೀವು ಗೋರಿಯ ಅಂಚನ್ನು ತಲುಪುತ್ತೀರಿ." (ಪವಿತ್ರ ಕುರ್‌ಆನ್, 102:1-2)

ಕುರ್‌ಆನ್ ವ್ಯಾಖ್ಯಾನಕಾರರು, 'ಲಹ್ವ್' ಎಂಬ ಪದವನ್ನು 'ಅನಾಸ್ಥೆ' ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ. ಒಬ್ಬ ವ್ಯಕ್ತಿ ಇತರೆಲ್ಲ ಮಹತ್ವದ ಚಟುವಟಿಕೆಗಳನ್ನು ಕಡೆಗಣಿಸುವಷ್ಟರ ಮಟ್ಟಿಗೆ ಯಾವುದಾದರೂ ಒಂದು ಚಟುವಟಿಕೆಯಲ್ಲಿ ಆಸಕ್ತಿ ತೋರಿ ಅದರಲ್ಲೇ ಮಗ್ನನಾಗಿ ಬಿಟ್ಟರೆ ಅಂತಹ ಪ್ರತಿಯೊಂದು ಚಟುವಟಿಕೆಯ ಬಗ್ಗೆ ಅರಬೀ ಭಾಷೆಯಲ್ಲಿ ಈ ಪದವನ್ನು ಬಳಸಲಾಗುತ್ತದೆ.

ಉದಾಹರಣೆಗೆ- ಒಬ್ಬ ಯುವಕನಿಗೆ ಆಟದಲ್ಲಿ ಆಸಕ್ತಿ ಇದ್ದು, ಆತ ತನ್ನ ಹೆಚ್ಚಿನ ಸಮಯವನ್ನು ಆಟದಲ್ಲಿ ಕಳೆದು, ಊಟ, ನಿದ್ದೆ, ಶಿಕ್ಷಣಗಳಂತಹ ಮಹತ್ವದ ಕಾರ್ಯಗಳ ಬಗ್ಗೆ ಅನಾಸ್ಥೆ ತೋರಿಸಿದರೆ, ಆತ ಪ್ರಸಿದ್ಧ ಕ್ರೀಡಾಪಟು ಎಂದು ಅನಿಸಿಕೊಂಡರೂ ಅವನ ಒಟ್ಟು ಜೀವನದಲ್ಲಿ ಯಶಸ್ವಿಯುಂಟಾಗದು. ಆತ ಅಜ್ಞಾನಿ ಮತ್ತು ರೋಗಪೀಡಿತನಾಗು ವುದರಲ್ಲಿ ಸಂಶಯವಿಲ್ಲ.

ಇದೇ ರೀತಿ ಒಬ್ಬ ಮಹಿಳೆಗೆ ವಿಹಾರ, ಮನರಂಜನೆ ಮತ್ತು ಜನರನ್ನು ಸಂಪರ್ಕಿಸುವ ಅಭಿರುಚಿ ವಿಪರೀತವಾಗಿದ್ದು, ತನ್ನ ಈ ಅಭಿರುಚಿಗಾಗಿ ಆಕೆ ತನ್ನ ಮನೆ ಮತ್ತು ಮಕ್ಕಳ ಹೊಣೆಗಾರಿಕೆಯಿಂದ ಅಲಕ್ಷ್ಯ ವಹಿಸುತ್ತಾಳೆ. ಈಕೆಯ ಸ್ನೇಹಶೀಲತೆಗಾಗಿ ಜನರು ಈಕೆಯನ್ನು ಬಹಳ ಇಷ್ಟಪಡುತ್ತಾರೆ. ಆದರೆ ಈಕೆಯ ಮನೆ ಮತ್ತು ಮಕ್ಕಳು ಕಡೆಗಣಿಸಲ್ಪಡುತ್ತಿದ್ದಾರೆ. ಹೀಗೆ ಆದರೆ ಆಕೆಯ ಮನೆ ಮತ್ತು ಮಕ್ಕಳು ಹಾನಿಗೊಳಗಾಗುವುದರಲ್ಲಿ ಸಂಶಯವೇ ಇಲ್ಲ.

ಒಬ್ಬನಿಗೆ ತನ್ನ ಮಕ್ಕಳ ಭವಿಷ್ಯಕ್ಕಾಗಿ ಹೆಚ್ಚೆಚ್ಚು ಸಂಪಾದಿಸುವ ಆಸಕ್ತಿ. ಇದಕ್ಕಾಗಿ ತನ್ನೆಲ್ಲ ಶಕ್ತಿ ಸಾಮರ್ಥ್ಯ ಮತ್ತು ಸಮಯವನ್ನು ವಿನಿಯೋಗಿಸುತ್ತಾನೆ. ಆದರೆ ತನ್ನ ಮಕ್ಕಳ ಶಿಕ್ಷಣ ಮತ್ತು ತರಬೇತಿಯ ಬಗ್ಗೆ ಚಿಂತಿಸುವುದಿಲ್ಲ. ಪತ್ನಿಯ ಸುಖ ದುಃಖಗಳಲ್ಲಿ ಭಾಗಿಯಾಗುವುದಿಲ್ಲ. ಆಕೆಯೊಂದಿಗೆ ಕಳೆಯಲು ಸಮಯವಿಲ್ಲ, ಆಕೆಯ ಆರೋಗ್ಯ ಮತ್ತು

ವಿಶ್ರಾಂತಿಯ ಬಗ್ಗೆ ಕಾಳಜಿ ಇಲ್ಲ. ಈತ ಕೋಟ್ಯಾಧಿಪತಿ ಆದರೂ, ಇನ್ನೂ ಹೆಚ್ಚಿಗೆ ಶೇಖರಿಸುವ ಆಸಕ್ತಿ. ಇಂತಹವರು, ತಮ್ಮೊಂದಿಗೆ, ತಮ್ಮ ಮನೆಮಂದಿಯ ಸುಖ ಸಂತೋಷ, ನೆಮ್ಮದಿ ಇತ್ಯಾದಿಗಳನ್ನು ಕಳೆಯುತ್ತಾರೆ. ಮಕ್ಕಳ ಉತ್ತಮ ಭವಿಷ್ಯಕ್ಕಾಗಿ ಶೇಖರಿಸಿದ ಸಂಪತ್ತು, ನೈಜ ಸುಖ, ಸಂಪತ್ತು, ನೆಮ್ಮದಿಯನ್ನು ಒದಗಿಸುವುದೆಂದು ಏನು ಭರವಸೆ? ತಂದೆಯ ನಿರ್ಲಕ್ಷ್ಯದಿಂದ ಬೆಳೆದ ಮಕ್ಕಳ ಭವಿಷ್ಯ, ಸಂಪತ್ತಿನ ಹೆಚ್ಚಳದಿಂದ ಹಾಳಾಗುವುದರಲ್ಲಿ ಎರಡು ಮಾತಿಲ್ಲ.

ತನ್ನ ಆಟದ ಆಸಕ್ತಿಯಲ್ಲಿ ತಲ್ಲೀನನಾಗಿರುವ ಆ ಯುವಕ, ತನ್ನ ಮನರಂಜನೆಯಲ್ಲಿ ಮಗ್ನಳಾಗಿರುವ ಆ ಮಹಿಳೆ ಮತ್ತು ಸಂಪತ್ತಿನ ಶೇಖರಣೆಯ ಮೋಹದಲ್ಲಿ ಸಿಲುಕಿ ಕೊಂಡಿರುವ ಪುರುಷ ಇವರೆಲ್ಲರೂ 'ಲಹ್ವ್' ಎಂದರೆ 'ಅನಾಸ್ಥೆ'ಯ ಜೀವನ ಸಾಗಿಸು ತ್ತಿದ್ದಾರೆ. ಇಂತಹವರು ವಾಸ್ತವದಲ್ಲಿ ಮಹತ್ವವುಳ್ಳ ಕಾರ್ಯಗಳಿಂದ ಅನಾಸ್ಥೆ ಹೊಂದಿದ್ದಾರೆ. 'ಅತ್ತಕಾಸುರ್' ಅಧ್ಯಾಯದ ಪ್ರಾರಂಭದ ಸೂಕ್ತದಲ್ಲಿ ಅಲ್ಲಾಹನು ಮನುಷ್ಯರನ್ನು ಸಂಬೋಧಿಸಿ- 'ತಕಾಸುರ್' ನಿಮ್ಮನ್ನು ಅನಾಸ್ಥೆಗೆ ಒಳಪಡಿಸಿದೆ. ನೀವು ಗೋರಿಯ ಅಂಚನ್ನು ತಲುಪುವ ತನಕ' ಎಂದು ಹೇಳುತ್ತಾನೆ.

ತಕಾಸುರ್‌ನ ಅರ್ಥವೇನು? ತಫ್ಹೀಮುಲ್ ಕುರ್‌ಆನಿನ ಪ್ರಕಾರ 'ತಕಾಸುರ್'ನ ಅರ್ಥ ಹೀಗಿದೆ:

1. ಅತೀ ಹೆಚ್ಚು ಪಡೆಯುವ ಪ್ರಯತ್ನ
2. ಅತಿ ಹೆಚ್ಚು ಪಡೆಯುವ ಪೈಪೋಟಿ
3. ಪೈಪೋಟಿ ಮತ್ತು ಪರಸ್ಪರ ಹೆಮ್ಮೆ ಪಡೆಯುವುದು

ಅತಿ ಹೆಚ್ಚು ಗಳಿಸುವ ವ್ಯಾಮೋಹದಲ್ಲಿ ಮನುಷ್ಯ ತನ್ನ ಇಡೀ ಜೀವನವನ್ನು ವ್ಯಯಿಸುತ್ತಾನೆ, ಪೈಪೋಟಿ ನಡೆಸುತ್ತಾನೆ ಮತ್ತು ಈ ಬಗ್ಗೆ ಪರಸ್ಪರ ಹೆಮ್ಮೆಪಡುತ್ತ ಮರಣವನ್ನು ಸಮೀಪಿಸುತ್ತಾನೆ. ಅತಿಮೋಹದಲ್ಲಿ ಸಿಲುಕಿ ಮನುಷ್ಯ ತನ್ನ ಜೀವನದ ನೈಜ ಉದ್ದೇಶವನ್ನು ಮರೆತು ವ್ಯರ್ಥ ಕಾರ್ಯಗಳಲ್ಲಿ ತಲ್ಲೀನನಾಗುತ್ತಾನೆ ಎಂದು ಅಲ್ಲಾಹನು ಈ ಎರಡು ಸೂಕ್ತಗಳಲ್ಲಿ ಮನುಷ್ಯನಿಗೆ ಎಚ್ಚರಿಸಿದ್ದಾನೆ.

ನಿಮ್ಮ 'ಅತಿಮೋಹವು' ನಿಮ್ಮನ್ನು ನಿಮ್ಮ ನೈಜ ಉದ್ದೇಶದಿಂದ ದೂರೀಕರಿಸಿದೆ ಎಂಬ ಮಾತು ಇಲ್ಲಿ ಗಮನಾರ್ಹ. ಆದರೆ ಯಾವುದರ ಮೋಹ ಮತ್ತು ನೈಜ ಉದ್ದೇಶ ಯಾವುದು ಎಂಬ ಬಗ್ಗೆ ಪ್ರಸ್ತಾಪಿಸಲಿಲ್ಲ. ಆದ್ದರಿಂದ ಈ ವಾಕ್ಯ ಬಹಳ ಅರ್ಥಗರ್ಭಿತ ವಾಗಿದೆ ಎಂದು ಭಾಷಾ ತಜ್ಞರ ಮತ್ತು ಚಿಂತಕರ ಅಭಿಪ್ರಾಯ. ಇದನ್ನು ಅರ್ಥೈಸಲು ಈ ಘಟನೆಯನ್ನು ನೋಡೋಣ.

ಒಂದು ಕಂಪೆನಿಯಲ್ಲಿ ಜಪಾನಿ ಯುವಕನೋರ್ವ ಕೆಲಸ ಮಾಡುತ್ತಿದ್ದ. ಗಿರಾಕಿಯೋರ್ವ ಈ ಕಂಪೆನಿಯಿಂದ ಸಾಲ ಪಡೆದುಕೊಂಡಿದ್ದ. ಹಲವಾರು ಸಲ ಹೇಳಿದರೂ ಆತ ತನ್ನ ಸಾಲವನ್ನು ಹಿಂತಿರುಗಿಸುತ್ತಿರಲಿಲ್ಲ. ಪತ್ರದ ಮುಖಾಂತರ ಪುನಃ ನೆನಪಿಸುವಂತೆ ಆ ಜಪಾನಿ

ಯುವಕನಿಗೆ ಆದೇಶಿಸಲಾಯಿತು. ಪತ್ರ ಬರೆದ ಕೆಲವೇ ದಿನಗಳಲ್ಲಿ ಆತ ಹಣ ಪಾವತಿಸಿದ. ಇಷ್ಟು ಸಮಯದಿಂದ ಹಣ ಪಾವತಿಸದ ಆತ, ಪತ್ರ ನೋಡಿದ ತಕ್ಷಣ ಹಣ ಪಾವತಿಸುವಂತೆ, ಆ ಪತ್ರದಲ್ಲಿ ಏನು ಬರೆದಿರಬಹುದು ಎಂದು ಕಂಪೆನಿ ಮಾಲೀಕನಿಗೆ ಆಶ್ಚರ್ಯವಾಯಿತು. ಆತ ಆ ಪತ್ರ ಓದ ಬಯಸಿದ. ಪತ್ರದಲ್ಲಿ,

"ಇಷ್ಟು ಸಮಯದಿಂದ, ಇಷ್ಟು ಮೊತ್ತ ನಿಮ್ಮ ಮೇಲೆ ಸಾಲ ಇದೆ. ಇಂತಿಂತಹ ತಾರೀಕಿನ ವರೆಗೆ ನೀವು ಹಣ ಪಾವತಿಸದೆ ಇದ್ದಲ್ಲಿ, ಅದರ ಪರಿಣಾಮವನ್ನು ನೀವು ಊಹಿಸಲು ಸಾಧ್ಯವಿಲ್ಲ" ಎಂದು ಬರೆಯಲಾಗಿತ್ತು.

ಇಲ್ಲಿ ಎಂತಹ 'ಪರಿಣಾಮ' ಎಂದು ವಿವರಿಸದ್ದ ಕಾರಣ ಗಿರಾಕಿ ಭಯಪಟ್ಟು, ಹಣ ಹಿಂತಿರುಗಿಸಿದ.

ಅದೇ ರೀತಿ ಈ ಸೂಕ್ತದಲ್ಲಿ ಕೂಡ, ಮನುಷ್ಯ ಯಾವ ವಸ್ತುವಿನ ಬಗ್ಗೆ ಆಶೆ, ಪೈಪೋಟಿ ಮತ್ತು ಹೆಮ್ಮೆ ಪಡುವಲ್ಲಿ ತನ್ನ ನೈಜ ಉದ್ದೇಶವನ್ನು ಮರೆತು ಬಿಟ್ಟಿದ್ದಾನೆ ಎಂಬ ಬಗ್ಗೆ ವಿವರಿಸಲಾಗಿಲ್ಲ. ಅರ್ಥಾತ್ ಮನುಷ್ಯ ಅನೇಕ ವಸ್ತುಗಳ ಮೋಹದಲ್ಲಿ ಸಿಲುಕಿ ತನ್ನ ನೈಜ ಉದ್ದೇಶದಿಂದ ದೂರ ಸರಿದಿದ್ದಾನೆ ಎಂದಾಗಿದೆ. ಉದಾಹರಣೆಗೆ:-

1. ಸಂಪತ್ತಿನ ಮೋಹ
2. ಐಷಾರಾಮಿ ಜೀವನದ ಮೋಹ
3. ವೈಭವ ಪೂರ್ಣ ಜೀವನದ ಮೋಹ
4. ಉನ್ನತ ಹುದ್ದೆಯ ಮೋಹ
5. ಅಧಿಕಾರದ ಮೋಹ
6. ಆಗರ್ಭ ಸಿರಿವಂತಿಕೆಯ ಮೋಹ
7. ದೈಹಿಕ ಬೇಡಿಕೆಗಳನ್ನು ಪೂರೈಸಲು ಬೇಕಾದ ವಸ್ತುಗಳ ಮೋಹ
8. ತನ್ನ ಸೌಂದರ್ಯ, ಅಲಂಕಾರ, ಆಲಂಕಾರಿಕ ವಸ್ತುಗಳು, ಘನತೆ, ಗೌರವ, ದರ್ಪ, ಪ್ರಸಿದ್ಧಿ ಮುಂತಾದವುಗಳಲ್ಲಿ ಉನ್ನತಿಯನ್ನು ಪಡೆಯುವ ಬಯಕೆ.

ಇಂತಹ ಅನೇಕ ಬಯಕೆಗಳಲ್ಲಿ ಸಿಲುಕಿ ಆತ ಅಲ್ಲಾಹ್ ಮತ್ತು ಅಲ್ಲಾಹನ ಪ್ರವಾದಿಯಿಂದ ದೂರ ಸರಿಯುತ್ತಿದ್ದಾನೆ.

* ಮರಣೋತ್ತರ ಜೀವನದ ಉತ್ತರದಾಯಿತ್ವವನ್ನು ಮರೆಯುತ್ತಾನೆ.
* ನೈತಿಕ ಹೊಣೆಗಾರಿಕೆಗಳನ್ನು ಮರೆಯುತ್ತಾನೆ.
* ತನ್ನ ಕರ್ತವ್ಯ ಮತ್ತು ಇತರರ ಹಕ್ಕುಗಳನ್ನು ನಿರ್ಲಕ್ಷಿಸುತ್ತಾನೆ.
* ದೈಹಿಕ ಬೇಡಿಕೆಗಳ ಕಾರಣ, ಇಹ-ಪರ ಲೋಕದ ಜೀವನದ ಮೇಲೆ ಆಗುವ ದುಷ್ಪರಿಣಾಮವನ್ನು ಮರೆಯುತ್ತಾನೆ.
* ಧರ್ಮಸಮ್ಮತ ಮತ್ತು ಧರ್ಮ ಬಾಹಿರ ಜೀವನಾಧಾರವನ್ನು ನಿರ್ಲಕ್ಷಿಸುತ್ತಾನೆ.

* ಆತನ ದುರಾಸೆಯ ಕುರುಡುತನದಿಂದ, ಆತ ಹಗಲಿರುಳು ತಪ್ಪು ದಾರಿಯಲ್ಲಿ ನಡೆಯುವವರ ಜೀವನದ ಭಯಾನಕ ಪರಿಣಾಮವನ್ನು ಕಂಡು ಕೂಡ, ಅದರಿಂದ ಪಾಠ ಕಲಿಯುವುದಿಲ್ಲ.

ದುರಾಸೆ ಮನುಷ್ಯನ ವೈರಿ. ಆದರೂ, ಮನುಷ್ಯ ದುರಾಸೆಯ ದುಷ್ಪರಿಣಾಮಗಳನ್ನು ನೋಡುವ ಪರಿಸ್ಥಿತಿಯಲ್ಲಿರುವುದಿಲ್ಲ. ಬದಲಾಗಿ, ಆತನ ದುರಾಸೆಯ ಆತನನ್ನು ಯಾವ ದಾರಿಯಲ್ಲಿ ಕೊಂಡು ಹೋಗುತ್ತದೆಯೋ, ಆತ ಆ ದಾರಿಯಲ್ಲಿ ಸಾಗುತ್ತಾನೆ. ಈ ದುರಾಸೆ ಯಿಂದ ಆತನಿಗೆ ಸುಖ ಸಂತೋಷ, ನೆಮ್ಮದಿ ಪ್ರಾಪ್ತಿ ಆಗುತ್ತಿದೆಯೇ? ಅಥವಾ ವ್ಯಾಕುಲತೆ, ಚಿಂತೆ ಮೊದಲಾದವುಗಳನ್ನು ಸೃಷ್ಟಿಸುತ್ತಿದೆಯೇ ಎಂಬ ಬಗ್ಗೆ ಚಿಂತಿಸುವುದ ರಿಂದ ತಡೆಯುತ್ತದೆ.

ಸೂರಃ ಅಲ್ ಹದೀದ್‌ನ 20ನೇ ಸೂಕ್ತದಲ್ಲಿ ಅಲ್ಲಾಹನು ಈ ರೀತಿ ಹೇಳಿರುವನು.

اِعْلَمُوْٓا اَنَّمَا الْحَيٰوةُ الدُّنْيَا لَعِبٌ وَّ لَهْوٌ وَّ زِيْنَةٌ وَّ تَفَاخُرٌۢ بَيْنَكُمْ وَ تَكَاثُرٌ فِى

الْاَمْوَالِ وَالْاَوْلَادِ

**"ಚೆನ್ನಾಗಿ ತಿಳಿದುಕೊಳ್ಳಿರಿ! ಈ ಲೌಕಿಕ ಜೀವನವು ಕೇವಲ ಒಂದು ಆಟ, ವಿನೋದ, ತೋರಿಕೆಯ ವೈಭವ, ಪರಸ್ಪರರ ಮೇಲೆ ಹಿರಿಮೆ ಸಾಧಿಸುವ ಪ್ರಯತ್ನ ಮತ್ತು ಸಂಪತ್ತು ಹಾಗೂ ಸಂತಾನದ ವಿಷಯದಲ್ಲಿ ಪರಸ್ಪರರನ್ನು ಮೀರಿ ಹೋಗುವ ಪೈಪೋಟಿ ಮಾತ್ರವಲ್ಲದೆ ಇನ್ನೇನೂ ಅಲ್ಲ."**

ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಹಲವು ಕಡೆ ಸಂಪತ್ತು, ಹಿರಿಮೆ ಮತ್ತು ಮನಸ್ಸಿಗೆ ಮುದ ನೀಡುವಂತಹ ವಸ್ತುಗಳ ವ್ಯಾಮೋಹದ ಬಗ್ಗೆ ಪ್ರಸ್ತಾಪಿಸಲಾಗಿದೆ. ಇದರ ಅರ್ಥ ಮನುಷ್ಯ ಧರ್ಮಸಮ್ಮತವಾದ ಮೇರೆಯಲ್ಲಿದ್ದು ದುಡಿಯಬಾರದು ಅಥವಾ ತನ್ನ ವ್ಯಾಪಾರವನ್ನು ವಿಸ್ತರಿಸುವ ಪ್ರಯತ್ನಪಡಬಾರದು ಎಂದಲ್ಲ. ಸಂಪತ್ತನ್ನು ಹೆಚ್ಚಿಸುವ ಪ್ರಯತ್ನ ಧರ್ಮಸಮ್ಮತ ಕಾರ್ಯ. ಆದರೆ ನಮ್ಮ ಸಂಪಾದನೆ, ನಮ್ಮ ಉದ್ಯೋಗ, ನಮ್ಮ ವ್ಯಾಪಾರಗಳೆಲ್ಲವೂ ಧರ್ಮಸಮ್ಮತವಾದ ರೀತಿಯಲ್ಲಿ ನಡೆಯುವಂತೆ ಎಚ್ಚರ ವಹಿಸುವುದು ಅತ್ಯಗತ್ಯ. ಇದೆಲ್ಲ ಯಶಸ್ಸು ಗಳಿಸುವ ಸಾಧನಗಳಾಗಿವೆ ಆದರೆ ಇದು ನೈಜ ಯಶಸ್ಸಲ್ಲ.

ಲೌಕಿಕ ಜೀವನವು ಪಾರಲೌಕಿಕ ಜೀವನದ ಯಶಸ್ಸಿನ ಹಾದಿ ಎಂದು ಅರಿತಿರುವವರು ಕೂಡ, ತಮ್ಮ ಜೀವನಾಧಾರಕ್ಕಾಗಿ ಶ್ರಮಿಸುತ್ತಾರೆ. ಅವರ ಉದ್ದೇಶ ತಮ್ಮ ಜೀವನದ ಬೇಡಿಕೆಗಳನ್ನು ಪೂರೈಸುವುದರೊಂದಿಗೆ ಹಕ್ಕುದಾರರ ಹಕ್ಕುಗಳನ್ನು ಔದಾರ್ಯತೆಯಿಂದ ಪೂರೈಸುವ ಯೋಗ್ಯತೆಯನ್ನು ಸಾಧಿಸುವುದು ಮತ್ತು ತಮ್ಮ ಅವಶ್ಯಕತೆಗಳನ್ನು ಪೂರೈಸುವುದ ರೊಂದಿಗೆ ಇತರರ ಅವಶ್ಯಕತೆಗಳನ್ನು ಕೂಡ ಪೂರೈಸುವುದಾಗಿದೆ. ದೇಶ ಮತ್ತು ದೇಶ ವಾಸಿಗರನ್ನು ಸಹಕರಿಸುವುದರಲ್ಲಿ ಪರಲೋಕದ ಗೆಲುವು ಇದೆ ಎಂದು ಅವರು ಅರಿತಿರುತ್ತಾರೆ.

ಇದಕ್ಕೆ ವ್ಯತಿರಿಕ್ತವಾಗಿ, ಪರಲೋಕದ ಯಶಸ್ಸಿನ ಬಗ್ಗೆ ಚಿಂತಿಸದವರು, ತಮ್ಮ ಕಣ್ಣಿಗೆ ಗೋಚರಿಸುವ, ಮರಣಕ್ಕಿಂತ ಮೊದಲು ಸಿಗುವ ಯಶಸ್ಸನ್ನು ನೈಜ ಯಶಸ್ಸೇ ಎಂದು ಭಾವಿಸುತ್ತಾರೆ. ಇಂತಹವರು ತಮ್ಮ ಜೀವನಾಧಾರದ ಅವಶ್ಯಕತೆಗಳನ್ನು ಪೂರೈಸುವುದು ತಮ್ಮ ಧ್ಯೇಯ ಎಂದು ಭಾವಿಸುವುದಲ್ಲದೆ, ಹಕ್ಕುದಾರರ ಹಕ್ಕುಗಳನ್ನು ಪೂರೈಸುವುದು, ಅವಶ್ಯಕತೆ ಯುಳ್ಳವರ ಅವಶ್ಯಕತೆಗಳನ್ನು ಪೂರೈಸುವುದರಲ್ಲಿ ಸಂಪೂರ್ಣ ಸಂತೃಪ್ತರಾಗುವುದಿಲ್ಲ. ಇವರು ತಮ್ಮ ವೈಭವ ತಮ್ಮ ಶೃಂಗಾರಗಳ ಪ್ರದರ್ಶನ ತಮ್ಮ ಸಂಪತ್ತಿನ ಹಿರಿಮೆ ಗಳಿಕೆ, ಮತ್ತು ದರ್ಪ ತೋರುವುದನ್ನು ನೈಜ ಯಶಸ್ಸು ಎಂದು ಭಾವಿಸುತ್ತಾರೆ.

ಇದನ್ನೇ ಜೀವನದ ಉದ್ದೇಶವಾಗಿಟ್ಟುಕೊಂಡವರ ಬಗ್ಗೆ

لَعِبٌ وَّلَهْوٌ وَّزِينَةٌ وَّتَفَاخُرٌ بَيْنَكُمْ وَتَكَاثُرٌ فِي الْأَمْوَالِ وَالْأَوْلَادِ

"ಕೇವಲ ಒಂದು ಆಟ, ವಿನೋದ, ತೋರಿಕೆಯ ವೈಭವ, ಪರಸ್ಪರರ ಮೇಲೆ ಹಿರಿಮೆ ಸಾಧಿಸುವ ಪ್ರಯತ್ನ ಮತ್ತು ಸಂಪತ್ತು ಹಾಗೂ ಸಂತಾನದ ವಿಷಯದಲ್ಲಿ ಪರಸ್ಪರರನ್ನು ಮೀರಿ ಹೋಗುವ ಪೈಪೋಟಿ ಮಾತ್ರವಲ್ಲದೆ ಇನ್ನೇನೂ ಅಲ್ಲ" ಎಂದು ಹೇಳಲಾಗಿದೆ.

ಇದರ ಭಯಾನಕ ದುಷ್ಪರಿಣಾಮ, ಕೊನೆಯಿಲ್ಲದ ದುರಾಸೆಯಾಗಿದೆ. ಮನುಷ್ಯ ಜೀವನದಲ್ಲಿ ಈ ದುರಾಸೆ ಆಳಕ್ಕೆ ಇಳಿದಂತೆ, ಮನುಷ್ಯ ಪರಸ್ಪರ ಹಿರಿಮೆ ಸಾಧಿಸಲಿಕ್ಕಾಗಿ ಪೈಪೋಟಿ ನಡೆಸುತ್ತಾನೆ. ಅಸಂಖ್ಯಾತ ವಸ್ತುಗಳನ್ನು ಶೇಖರಿಸುವುದರಲ್ಲಿ ಮಗ್ನನಾಗಿರುತ್ತಾನೆ. ದುರಾಸೆಯ ಪೈಪೋಟಿಯಲ್ಲಿ ಜೀವನ ಚಕ್ರವು ವೇಗವಾಗಿ ಸಾಗುತ್ತಾ, ಜೀವನದ ಬಹು ದೊಡ್ಡ ಹಂತ ಮುಗಿದಿರುವ ಸತ್ಯ ಅರಿಯುತ್ತಾನೆ.

ಈ ಸತ್ಯ ಒಂದು ಭಯಾನಕ, ದುಃಖಕರ ಸತ್ಯ ಎಂದು ಅರಿತರೂ ಮನುಷ್ಯನ ದುರಾಸೆ ಕೊನೆಗೊಳ್ಳುವುದಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಮನುಷ್ಯ ದುರಾಸೆಯ ಚಕ್ರವ್ಯೂಹ ದಲ್ಲಿ ಸಿಲುಕುತ್ತಾ ಮರಣವನ್ನೂ ಸಮೀಪಿಸುತ್ತಾನೆ ಮತ್ತು ಆತ ಬಯಸದ ಆ ದಿನವು ಆತನ ಎದುರು ಬಂದು ನಿಲ್ಲುತ್ತದೆ. ಈ ಬಗ್ಗೆ ಅಲ್ಲಾಹನು ಕುರ್‌ಆನಿನಲ್ಲಿ حَتَّىٰ زُرْتُمُ الْمَقَابِرَ (ಗೋರಿಯ ಅಂಚನ್ನು ತಲಪುವ ವರೆಗೆ) ಎಂದು ಹೇಳಿದ್ದಾನೆ.

ದುರಾಸೆಯ ಕಾರಣ ಮನುಷ್ಯ ವ್ಯಾಕುಲತೆಯಲ್ಲಿ ಸಿಲುಕುತ್ತಾನೆ. ಎಲ್ಲವೂ ಇದ್ದರೂ ಇಲ್ಲದ ವಸ್ತುಗಳ ಹಂಬಲ ಮತ್ತು ಚಿಂತೆ. ಅನಗತ್ಯ ವಸ್ತುಗಳನ್ನಾದರೂ ಪಡೆದು ಪ್ರಗತಿ ಸಾಧಿಸಬೇಕು ಎಂಬ ಚಿಂತೆ. ಇದ್ದುದರಲ್ಲಿ ಸಂತೋಷ ಸಂತೃಪ್ತಿಯ ಜೀವನ ಸಾಗಿಸುವ ಬದಲು, ಹೆಚ್ಚು ಪಡೆಯುವ ಹುಚ್ಚು ಲಾಲಸೆ! ಸಂಪತ್ತು, ಹಿರಿಮೆ ಅಥವಾ ಮನಮೋಹಕ ವಸ್ತುಗಳ ದುರಾಸೆಯಲ್ಲಿ ಮನುಷ್ಯ ಸದಾ ಓಡುತ್ತಿರುತ್ತಾನೆ. ಈ ಚಟದಿಂದಾಗಿ ಮನುಷ್ಯನ ದೇಹ, ಮನಸ್ಸು, ಸ್ನಾಯು ಇತ್ಯಾದಿಗಳೆಲ್ಲವೂ ದಣಿದಿರುತ್ತದೆ. ಆದರೂ ಜೀವನ ಉಳಿದಿರುತ್ತದೆ. ಮನುಷ್ಯ ಓಡುತ್ತಲೇ ಇರುತ್ತಾನೆ. ಈ ಬಗ್ಗೆ ಅಲ್ಲಾಹನು ಕುರ್‌ಆನಿನಲ್ಲಿ حَتَّىٰ زُرْتُمُ الْمَقَابِرَ (ಗೋರಿಯ ಅಂಚನ್ನು ತಲಪುವ ವರೆಗೆ) ಎಂದು ಹೇಳುತ್ತಾನೆ.

# ಖಂಡನೆ: ಹದೀಸಿನಲ್ಲಿ

''ಹಝ್ರತ್ ಕಅಬ್ ಬಿನ್ ಮಾಲಿಕ್‌ರಿಂದ(ರ) ಉಲ್ಲೇಖಿತ. ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು.... ಎರಡು ತೋಳಗಳನ್ನು ಕುರಿ ಮಂದೆಯ ನಡುವೆ ಬಿಟ್ಟರೆ ಅದು ಆ ಕುರಿಗಳಿಗೆ ಮಾಡುವ ಹಾನಿಗಿಂತ ಮಿಗಿಲಾಗಿ, ಮನುಷ್ಯ ಸಂಪತ್ತು ಮತ್ತು ಹಿರಿಮೆಯ ಲಾಲಸೆಯಲ್ಲಿ ಸಿಲುಕಿ ತನ್ನ ಧರ್ಮದ ನಾಶವನ್ನು ಮಾಡುತ್ತಾನೆ. (ತಿರ್ಮಿದಿ)

ಹಿರಿಮೆ ಮತ್ತು ಹಿರಿಮೆಯ ದುರಾಸೆಯನ್ನು ಪ್ರವಾದಿ ಮುಹಮ್ಮದ್‌ರು(ಸ) ತೋಳಗಳಿಗೆ ಹೋಲಿಸಿದ್ದಾರೆ. ತೋಳಗಳು ಕ್ರೂರತೆಗೆ ಪ್ರಸಿದ್ಧ. ಕ್ರೂರಿ ತೋಳಗಳು ಕುರಿ ಮಂದೆಯ ಮಧ್ಯ ಪ್ರವೇಶಿಸಿ ಮಾಡುವ ಭೀಕರ ಹಾನಿಯಂತೆ, ಮನುಷ್ಯನ ಮನಸ್ಸಿನಲ್ಲಿ ಸಂಪತ್ತು ಮತ್ತು ಪ್ರಸಿದ್ಧಿಯ ದುರಾಸೆ ಹುಟ್ಟಿ, ಧರ್ಮದ ತಿರುಳನ್ನು ಅದೇ ರೀತಿ ನಾಶ ಮಾಡಿ, ಮನುಷ್ಯ ಜೀವನವನ್ನು ಹಲವಾರು ರೀತಿಯಲ್ಲಿ ಸಮಸ್ಯೆ, ದುಃಖ ಮತ್ತು ಅಡಚಣೆಗಳಲ್ಲಿ ಸಿಲುಕಿಸುತ್ತದೆ. ಮನುಷ್ಯನ ಧಾರ್ಮಿಕ ತಿರುಳು ಮತ್ತು ಮರಣೋತ್ತರ ಜೀವನವನ್ನು ನಾಶಪಡಿಸುವುದರೊಂದಿಗೆ ಆತನ ಲೌಕಿಕ ಜೀವನದ ಸುಖ ಶಾಂತಿಯನ್ನು ಸಹ ಭಗ್ನಗೊಳಿಸುತ್ತದೆ.

ಮನುಷ್ಯನ ನೈಜ ಹಿತಚಿಂತಕ ಮನುಷ್ಯನ ಸೃಷ್ಟಿಕರ್ತನಲ್ಲದೆ ಬೇರೆ ಯಾರೂ ಇಲ್ಲ ಎಂದು ಪದೇ ಪದೇ ಒತ್ತು ಕೊಟ್ಟು ಹೇಳಿದರೂ ತಪ್ಪಾಗಲಾರದು. ಹೀಗಿರುವಾಗ ಮನುಷ್ಯ ಆ ಹಿತಚಿಂತಕನ ಮೇಲೆ ಮನಸ್ಸಿನಾಳದಿಂದ ಸಂಪೂರ್ಣ ಮತ್ತು ನಿಸ್ಸಂದೇಹ ಭರವಸೆ ಇಡುವುದು ಧರ್ಮದ ಆದ್ಯ ಬೇಡಿಕೆ. ಅಲ್ಲಾಹನು ಸಮ್ಮತಿಸಿದಂತಹ ವಿಷಯಗಳಲ್ಲಿ ಮನುಷ್ಯನ ಲಾಭ ಅಡಗಿದೆ ಮತ್ತು ಆತ ತಡೆದಿರುವ ವಿಷಯಗಳಿಂದ ತಮ್ಮನ್ನು ತಡೆಯದೆ ಇದ್ದರೆ ಮನುಷ್ಯನ ನಾಶ ಅವಶ್ಯ ಎಂಬ ಮಾತು ನಗ್ನ ಸತ್ಯ. ಆದುದರಿಂದ ಮನುಷ್ಯನನ್ನು ನಷ್ಟದಿಂದ ರಕ್ಷಿಸುವುದು ಸಂಪತ್ತು ಮತ್ತು ಹಿರಿಮೆಗಳಂತಹ ದುರಾಸೆಯಿಂದ ಅಲ್ಲಾಹನು ನಮ್ಮನ್ನು ತಡೆದಿರುವ ಉದ್ದೇಶ. ಮನುಷ್ಯನ ಕರ್ಮಗಳು ಮನುಷ್ಯನನ್ನು ಅನೇಕ ದುಃಖ, ವಿಪತ್ತು, ಸಂಕಷ್ಟ ಮತ್ತು ವ್ಯಾಕುಲತೆಗಳಲ್ಲಿ ಸಿಲುಕಿಸುತ್ತದೆ. ಲೋಭ ಮತ್ತು ದುರಾಸೆ, ಇವೆರಡು ಒಂದು ನಾಣ್ಯದ ಎರಡು ಮುಖಗಳು. ಉದಾಹರಣೆಗೆ......

* ಅಪ್ರಾಮಾಣಿಕತೆ ಮತ್ತು ವಂಚನೆ
* ಕಳ್ಳತನ, ದರೋಡೆ ಮತ್ತು ಅಪಹರಣ

* ಲಂಚ
* ಜೂಜಾಟ
* ಬಡ್ಡಿ
* ಅಕ್ರಮ ದಾಸ್ತಾನು ಮತ್ತು ಕಾಳಸಂತೆ
* ಸ್ಮಗ್ಲಿಂಗ್
* ಕಲಬೆರಕೆ
* ನಿಷಿದ್ಧ, ಅನಾರೋಗ್ಯಕರ ಮತ್ತು ಅನೈತಿಕ ವ್ಯಾಪಾರ
* ಸುಳ್ಳು ಆಣೆ ಹಾಕಿ ವ್ಯಾಪಾರ ಕುದುರಿಸುವುದು
* ಅಪಹರಣ ಮತ್ತು ಗುಲಾಮರ ವ್ಯಾಪಾರ
* ಶಕ್ತಿ ಮತ್ತು ಹಿಂಸೆಯಿಂದ ಜನರ ಸಂಪತ್ತು ಕಬಳಿಸುವುದು
* ಮಕ್ಕಳು ಮತ್ತು ವಯಸ್ಕರನ್ನು ಅಪಹರಿಸಿ, ಅಂಗವಿಕಲರನ್ನಾಗಿ ಮಾಡಿ ಭಿಕ್ಷಾಟನೆಗೆ ಒಡ್ಡುವುದು
* ಆಸ್ತಿಯ ಲೋಭದಲ್ಲಿ ವಾರೀಸುದಾರರ ಕೊಲೆ
* ವಂಚನೆ
* ಅಮಲು ಪದಾರ್ಥಗಳ ಕಳ್ಳ ವ್ಯಾಪಾರ
* ಸುಳ್ಳು ಮೊಕದ್ದಮೆಯಿಂದ ಜನರ ಹಕ್ಕುಗಳನ್ನು ಕಬಳಿಸುವುದು
* ಅನಾಥ ಮಕ್ಕಳ, ವಿಧವೆಯರ ಮತ್ತು ದುರ್ಬಲರ ಆಸ್ತಿ ಸೊತ್ತುಗಳನ್ನು ಕಸಿಯುವುದು
* ಅಧಿಕಾರಕ್ಕಾಗಿ ದೇಶದಲ್ಲಿ ಗುಲ್ಲೆಬ್ಬಿಸುವುದು
* ಅಧಿಕಾರಕ್ಕಾಗಿ ಜನರಲ್ಲಿ ಭಾಷೆ, ಧರ್ಮ, ಜಾತಿ ಮತಗಳ ಪಕ್ಷಪಾತವನ್ನು ಹುಟ್ಟಿಸುವುದು
* ಚುನಾವಣೆಗಳ ಸಮಯ ದಾಂಧಲೆ ಮಾಡಿ, ಮತಗಟ್ಟೆಗಳನ್ನು ಕಸಿದು ನಕಲಿ ಮತಗಳನ್ನು ಚಲಾಯಿಸುವುದು
* ಜನರ ಮಧ್ಯೆ ಭೀತಿ ಹುಟ್ಟಿಸಿ, ತನ್ನ ಪರ ವಹಿಸುವಂತೆ ಒತ್ತಾಯಿಸುವುದು
* ಜನಸಾಮಾನ್ಯರಲ್ಲಿ ಸುಳ್ಳು ಪ್ರಮಾಣಗಳನ್ನು ಮಾಡುವುದು
* ಅಧಿಕಾರದಾಹದಲ್ಲಿ ಕಾನೂನು ಬಾಹಿರ ಕೆಲಸಗಳನ್ನು ಮಾಡುವುದು ಮತ್ತು ಸರಕಾರಿ ಸೊತ್ತುಗಳನ್ನು ನಾಶ ಪಡಿಸುವುದು

* ದೇಶ ಮತ್ತು ಸಮುದಾಯದೊಂದಿಗೆ ವಿದ್ರೋಹ

ಈ ರೀತಿ ಅನೇಕಾನೇಕ ಕೆಟ್ಟ ಕಾರ್ಯಗಳನ್ನು ಮಾಡುವುದು.

ಸಮಾಜದಲ್ಲಿ ಕೆಡುಕುಗಳು ಸಾಮಾನ್ಯವಾದಾಗ ಸದ್ಗುಣಗಳು ಸ್ವಾಭಾವಿಕವಾಗಿ ನಾಶಗೊಳ್ಳುತ್ತದೆ. ಉದಾಹರಣೆಗೆ...

* ಸೃಷ್ಟಿಕರ್ತನ ಭಯಭಕ್ತಿ
* ಪ್ರವಾದಿಯ ಮೇಲಿನ ಪ್ರೀತಿ ಮತ್ತು ವಿಧೇಯತೆ
* ಉತ್ತರದಾಯಿತ್ವದ ಪ್ರಜ್ಞೆ
* ಧರ್ಮಸಮ್ಮತ ಮತ್ತು ಧರ್ಮ ಬಾಹಿರದ ಅರಿವು
* ಭರವಸೆ ಮತ್ತು ಸಂತೃಪ್ತಿ
* ಪರಸ್ಪರ ಸಹಕಾರ
* ಮಾನವೀಯ ಸಂಬಂಧಗಳು ಮತ್ತು ಅದರ ರಕ್ಷಣೆ
* ಅಜ್ಞಾನವನ್ನು ಹೋಗಲಾಡಿಸಿ ಇಸ್ಲಾಮೀ ಭ್ರಾತೃತ್ವವನ್ನು ಬೆಳೆಸುವ ಸ್ಫೂರ್ತಿ
* ಹಕ್ಕುಗಳನ್ನು ಪಡೆಯುವ ಬದಲು, ತನ್ನ ಕರ್ತವ್ಯ ನಿಭಾಯಿಸುವ ಚಿಂತೆ.
* ಸಂಪತ್ತು ಮತ್ತು ಹಿರಿಮೆಯ ಬದಲು ಮಾನವ ಗೌರವ.
* ಸರಕಾರಿ ಸೊತ್ತು ಮತ್ತು ಆಸ್ತಿಗಳನ್ನು ರಕ್ಷಿಸುವ ಚಿಂತೆ.
* ಸಮುದಾಯದೊಂದಿಗೆ ಆತ್ಮೀಯತೆಯ ಚಿಂತೆ.... ಇತ್ಯಾದಿ ಇತ್ಯಾದಿ

ಸಮಾಜದಲ್ಲಿ ಕೆಡುಕುಗಳು ಸರ್ವೇ ಸಾಮಾನ್ಯವಾಗಿ ಪಸರಿಸಿಕೊಂಡು ಸದ್ಗುಣ ಅಳಿದಾಗ, ಸಮಾಜದಲ್ಲಿ ದುಃಖ, ಅಡೆತಡೆ, ವ್ಯಾಕುಲತೆ ಮತ್ತು ಸಂಕಷ್ಟಗಳ ಸರಮಾಲೆ ಹುಟ್ಟದಿರಬಹುದೇ?

ಪ್ರವಾದಿ ಮುಹಮ್ಮದರು(ಸ) ಇದನ್ನು ಬಹಳ ಮನ ಮುಟ್ಟುವ ಶೈಲಿಯಲ್ಲಿ ಹೇಳಿರುವರು. ಇದಕ್ಕಿಂತ ಉತ್ತಮ ರೀತಿ ಬೇರೊಂದು ಸಿಗಲಿಕ್ಕಿಲ್ಲ.

ಹ. ಅಮ್ರ್ ಬಿನ್ ಆಸ್(ರ) ಉಲ್ಲೇಖಿಸುತ್ತಾರೆ. "ಅಲ್ಲಾಹನ ಪ್ರವಾದಿ ಮುಹಮ್ಮದ್(ಸ) ಹೇಳಿದರು, ಆದಮನ ಮಗನ ಪ್ರತಿಯೊಂದು ಕಂದರದಲ್ಲಿ ಒಂದು ಕೊಂಬೆ ಇದೆ. ಆ ಪ್ರತಿಯೊಂದು ಕೊಂಬೆಯಲ್ಲಿ ತನ್ನನ್ನು ಸಿಲುಕಿಸಿ ಬಿಟ್ಟವನು, ಯಾವ ಕಂದರದಲ್ಲಿ ನಾಶ ಹೊಂದಿದನು ಎಂಬ ಬಗ್ಗೆ ಅಲ್ಲಾಹನಿಗೆ ಚಿಂತೆ ಇಲ್ಲ ಮತ್ತು ಅಲ್ಲಾಹನ ಮೇಲೆ ಭರವಸೆ ಇಟ್ಟವನ ಪ್ರತಿಯೊಂದು ಕಂದರಕ್ಕೆ ಅಲ್ಲಾಹನು ಮಾತ್ರ ಸಾಕು.

(ಇಬ್ನುಮಾಜಃ)

ಆದಮನ ಹೃದಯದ ಪ್ರತಿ ಮೂಲೆಯಲ್ಲಿ ಒಂದು ಕೊಂಬೆ ಇದೆ ಎಂದರೆ ಮನುಷ್ಯನ ಹೃದಯದಲ್ಲಿ ಅನೇಕ ಆಕಾಂಕ್ಷೆಗಳಿವೆ ಎಂದರ್ಥ.

ಉದಾಹರಣೆಗೆ ಸಂತಾನದ ಆಸೆ, ಹಿರಿಮೆ ಮತ್ತು ಹುದ್ದೆಯ ಆಸೆ, ಆಸ್ತಿಪಾಸ್ತಿಯ ಆಸೆ, ಸ್ವಾದಿಷ್ಟ ಆಹಾರದ ಆಸೆ, ಅಲಂಕಾರ ವಸ್ತುಗಳ ಆಸೆ, ತೋಟ ಮತ್ತು ಜಮೀನು ಇತ್ಯಾದಿಗಳ ಆಸೆ. ಆತ ತನ್ನ ಆಸೆಗಳನ್ನು ಈಡೇರಿಸಲು ಹಗಲಿರುಳು ಶ್ರಮ ವಹಿಸಿ ದುಡಿಯುತ್ತಾರೆ. ಒಂದರ ನಂತರ ಇನ್ನೊಂದನ್ನು ಪಡೆಯುವ ಸ್ಪರ್ಧೆಯಲ್ಲಿ ಜೀವನ ಚಕ್ರ ನಶಿಸುತ್ತದೆ, ಈ ನಿರ್ಲಿಪ್ತತೆಯ ಪರಿಣಾಮ ಆತ ತನ್ನ ಸೃಷ್ಟಿಕರ್ತ ಮತ್ತು ಪರಲೋಕವನ್ನು ಮರೆಯುತ್ತಾನೆ. ಇವರು ಅಲ್ಲಾಹನ ಅನುಗ್ರಹದಿಂದ ವಂಚಿತರಾಗುತ್ತಾರೆ. ಇದರ ಪರಿಣಾಮ ತನ್ನ ದುರಾಸೆಯನ್ನು ಈಡೇರಿಸುತ್ತ ವಿನಾಶದೆಡೆಗೆ ಧಾವಿಸುತ್ತಿರುವುದನ್ನು ಆತ ಅರಿಯುವುದಿಲ್ಲ. ಈ ವಿನಾಶ ಲೌಕಿಕ ಹಾಗೂ ಪಾರಲೌಕಿಕ ವಿನಾಶ ಆಗಲೂಬಹುದು. ಅರ್ಥಾತ್... ಆತನ ದುರಾಸೆ, ಲೌಕಿಕ ಶಿಕ್ಷೆಗಳಿಗೆ ಗುರಿಯಾಗುವಂತಹ ಕೆಲಸಗಳನ್ನು ಆತನಿಂದ ಮಾಡಿಸುತ್ತದೆ. ಅರ್ಥಾತ್ ಲಂಚಕೋರ ಅಧಿಕಾರಿಗಳು, ಕಳ್ಳರು, ದರೋಡೆ ಕೋರರು, ಅಪಹರಣಕಾರರು ಮುಂತಾದವರು ಪ್ರಪಂಚದಲ್ಲಿ ವೇದನಾಯುಕ್ತ ಶಿಕ್ಷೆಗೆ ಗುರಿಯಾಗುತ್ತಾರೆ. ಬಡ್ಡಿಕೋರರು ಮತ್ತು ಅಕ್ರಮ ದಾಸ್ತಾನುಗಾರರಿಂದ ಸಮಾಜಕ್ಕೆ ಆಗುವ ಹಾನಿಯ ಕಾರಣ ಶಿಕ್ಷೆ ಅನುಭವಿಸ ಬೇಕಾಗುತ್ತದೆ. ಈ ಅಪರಾಧಿಗಳ ಶಿಕ್ಷೆ ಪ್ರಪಂಚದಲ್ಲಿ ಮುಗಿಯುವುದಿಲ್ಲ. ಬದಲಾಗಿ ಮರಣೋತ್ತರ ಜೀವನದಲ್ಲೂ ಶಿಕ್ಷೆ ಅನುಭವಿಸಬೇಕಾಗುತ್ತದೆ. ಆದರೆ ಈ ಎರಡು ಲೋಕಗಳ ಶಿಕ್ಷೆಯಲ್ಲಿರುವ ವ್ಯತ್ಯಾಸ, ಲೌಕಿಕ ಶಿಕ್ಷೆ ಮರಣದ ತನಕ ಮತ್ತು ಪಾರಲೌಕಿಕ ಶಿಕ್ಷೆ ಕೊನೆ ಇಲ್ಲದ ಮತ್ತು ಭಯಾನಕ ಶಿಕ್ಷೆ. ಲೌಕಿಕ ಜೀವನದ ಬೇಡಿಕೆಗಳನ್ನು ಈಡೇರಿಸುವುದು ಜೀವನದ ಉದ್ದೇಶ ಎಂದು ಭಾವಿಸಿ ಜೀವಿಸಿದಾತನ ಲೌಕಿಕ ಮತ್ತು ಪಾರಲೌಕಿಕ ವಿನಾಶ, ಯಾವ ಆಶೆಯನ್ನು ಈಡೇರಿಸುವುದರಲ್ಲಿ ಆಗಿದೆ ಎಂದು ಅಲ್ಲಾಹನು ಚಿಂತಿಸಲಾರ. ಇದಕ್ಕೆ ವ್ಯತಿರಿಕ್ತವಾಗಿ ಅಲ್ಲಾಹನ ಮೇಲೆ ಭರವಸೆ ಇಟ್ಟು ಜೀವಿಸಿದಾತನ ಆಕಾಂಕ್ಷೆಗಳನ್ನು ಅಲ್ಲಾಹನು ಸ್ವತಃ ಪೂರೈಸುವನು.

ಪ್ರವಾದಿ ಮುಹಮ್ಮದ್‌ರು(ಸ) ನಾಲ್ಕು ವಸ್ತುಗಳಿಂದ ಅಭಯ ಯಾಚಿಸುತ್ತಿದ್ದರು ಎಂದು ಹ. ಅಬ್ದುಲ್ಲಾ(ರ) ಇಬ್ನು ಉಮರ್ ಉಲ್ಲೇಖಿಸಿದ್ದಾರೆ.

ನಿರುಪಯೋಗಿ ಶಿಕ್ಷಣ, ನಿರ್ಭಯ ಹೃದಯ, ಅಸ್ವೀಕೃತ ಪ್ರಾರ್ಥನೆ, ಅಸಂತೃಪ್ತ ಮನಸ್ಸು. **(ನಸಾಈ)**

ಅಸಂತೃಪ್ತ ಮನಸ್ಸು ಎಂದರೆ ಅದೃಷ್ಟಹೀನ ಮನಸ್ಸು. ಆಕಾಂಕ್ಷೆಗಳ ಸರಮಾಲೆ ಮನಸ್ಸಿನಿಂದ ಸಂತೃಪ್ತಿಯನ್ನು ಕಸಿಯುತ್ತದೆ. ಅಲ್ಲಾಹನು ದಯಪಾಲಿಸಿರುವ ಅನುಗ್ರಹ ಗಳನ್ನು ಪಡೆದು ಸಂತುಷ್ಟ ಮತ್ತು ಸಂತೃಪ್ತಿಯ ಜೀವನ ಸಾಗಿಸುವ ಬದಲು ಹೆಚ್ಚೆಚ್ಚು ಪಡೆಯುವ ಆಸೆಯಲ್ಲಿ ಮನುಷ್ಯ ಅತ್ಯಧಿಕ ಪರಿಶ್ರಮ ವಹಿಸುತ್ತಾನೆ.

ಒಂದು ಪ್ರವಚನದಲ್ಲಿ ಪ್ರವಾದಿ ಮುಹಮ್ಮದ್‌ರು(ಸ) ಹೀಗೆ ಹೇಳಿರುವರು ಎಂದು ಹ. ಅಬ್ದುಲ್ಲಾ ಬಿನ್ ಅಮ್ರ್(ರ) ವರದಿ ಮಾಡುತ್ತಾರೆ.

"ದುರಾಸೆಯಿಂದ ನಿಮ್ಮನ್ನು ರಕ್ಷಿಸಿ. ಏಕೆಂದರೆ ನಿಮ್ಮ ಪೂರ್ವಜರು ದುರಾಸೆಯ ಕಾರಣದಿಂದಲೇ ನಾಶ ಹೊಂದಿದ್ದರು. ದುರಾಸೆಯು ಅವರಿಗೆ ಲೋಭಿಗಳಾಗುವಂತೆ ಪ್ರೇರೇಪಿಸಿತು ಮತ್ತು ಅವರು ಲೋಭಿಗಳಾದರು. ಲೋಭವು ಅವರಿಗೆ ಸಂಬಂಧಗಳನ್ನು ಕಡಿಯುವಂತೆ ಪ್ರೇರೇಪಿಸಿತು. ಅವರು ಸಂಬಂಧಗಳನ್ನು ಕಡಿದರು ಮತ್ತು ಲೋಭವು ಅವರನ್ನು ದುರಾಚಾರಿಗಳಾಗುವಂತೆ ಪ್ರೇರೇಪಿಸಿತು. ಅವರು ದುರಾಚಾರಿಗಳಾದರು.

(ಅಬೂದಾವೂದ್)

ಅರ್ಥಾತ್ ದುರಾಸೆ ಕೆಡುಕುಗಳ ಮೂಲ ಎಂದು ಇಲ್ಲಿ ತಿಳಿಸಲಾಗಿದೆ. ದುರಾಸೆಯ ಕಾರಣ ಜನರು ಲೋಭಿಗಳಾಗುತ್ತಾರೆ. ಸಂಬಂಧಿಕರೊಡನೆ ಸದ್ವರ್ತನೆಯಿಂದ ವರ್ತಿಸುವ ಬದಲು ಅವರ ಹಕ್ಕುಗಳನ್ನು ಕಸಿಯುತ್ತಾರೆ. ಆಸ್ತಿಗಳ ದುರಾಸೆಯಲ್ಲಿ ಸಂಬಂಧಿಕರನ್ನು ಕೊಲೆಗೈಯುವುದರಲ್ಲಿ ಹಿಂಜರಿಯುವುದಿಲ್ಲ. ಅಲ್ಲಾಹನೊಂದಿಗೆ ಅವಿಧೇಯತೆಯನ್ನು ತೋರಿಸುತ್ತಾ ದುರಾಚಾರಿಗಳಾಗುತ್ತಾರೆ. ಮನುಷ್ಯ ಒಂದು ಲಾಲಸೆಯಿಂದ ತನ್ನನ್ನು ತಡೆದರೆ, ಹಲವಾರು ಲಾಲಸೆ, ಪಾಪ ಮತ್ತು ಕೆಡುಕುಗಳಿಂದ ಪಾರಾಗುತ್ತಾನೆ ಎಂದು ಇಲ್ಲಿ ತಿಳಿಸಲಾಗಿದೆ.

ಹ. ಉಕ್ಬಾಬಿನ್ ಆಮಿರ್(ರ) ಹೇಳುತ್ತಾರೆ, ಒಮ್ಮೆ ಪ್ರವಾದಿ ಮುಹಮ್ಮದ್‌ರು(ಸ) ಹುತಾತ್ಮರ ಜನಾಝ ನಮಾಝ್(ಶವ ಸಂಸ್ಕಾರ) ನೆರವೇರಿಸಿ, ಮಿಂಬರನ್ನು ಹತ್ತಿ ಹೇಳಿದರು. "ನಾನು ನಿಮ್ಮ ಮುಖಂಡ ಮತ್ತು ನಿಮ್ಮ ಮೇಲೆ ಸಾಕ್ಷಿ ಆಗಿರುವೆನು, ಮತ್ತು ಅಲ್ಲಾಹನಾಣೆ! ನಾನು ನನ್ನ ಹೌಝ್(ಕೌಸರ ಸರೋವರ) ನೋಡುತ್ತಿರುವೆನು ಮತ್ತು ನನಗೆ ಭೂಮಿಯ ಖಜಾನೆಗಳ ಕೀಲಿ ಕೈಯನ್ನು ಕೊಡಲಾಗಿದೆ ಅಥವಾ (ಹೀಗೆ ಹೇಳಿದರು) ಭೂಮಿಯ ಕೀಲಿಕೈ (ಕೊಡಲಾಗಿದೆ) ಮತ್ತು ಅಲ್ಲಾಹನ ಆಣೆ, ನನ್ನ ನಂತರ ನೀವು ಶಿರ್ಕ್ ಮಾಡುವಿರಿ ಎಂಬ ಭಯ ನನಗೆ ಇಲ್ಲ. ಆದರೆ ನೀವು ಲೋಕದ ವ್ಯಾಮೋಹದಲ್ಲಿ ಮುಳುಗಿ ಹೋಗುವಿರಿ ಎಂಬ ಭಯ ನನಗೆ ಇದೆ. (ಬುಖಾರಿ)

ಈ ಹದೀಸಿನಲ್ಲಿ ಪ್ರವಾದಿ ಮುಹಮ್ಮದರು(ಸ) ಮನುಷ್ಯ ದೇವ ಸಹಭಾಗಿತ್ವದಲ್ಲಿ (ಶಿರ್ಕ್) ಸಿಲುಕುವ ಭಯ ಇಲ್ಲ, ಆದರೆ ಲೌಕಿಕ ವ್ಯಾಮೋಹದಲ್ಲಿ ಸಿಲುಕುವ ಭಯ ಇದೆ ಎಂದು ಹೇಳುತ್ತಾರೆ. ಅಂದರೆ ಲೌಕಿಕ ವ್ಯಾಮೋಹದ ಕಾರಣ ಆಗುವ ದುಷ್ಪರಿಣಾಮದ ಬಗ್ಗೆ ಪ್ರವಾದಿ ಮುಹಮ್ಮದ್‌ರು(ಸ) ಭಯಪಡುತ್ತಿದ್ದಾರೆ. ಪ್ರವಾದಿ ಮುಹಮ್ಮದ್‌ರ(ಸ) ನಂತರ ಮುಸ್ಲಿಮರು ಹಲವಾರು ರೀತಿಯ ಕೆಡುಕುಗಳನ್ನು ಉಪಕ್ರಮಿಸಿದರು. ಲೌಕಿಕ ವಸ್ತುಗಳ ಆಸೆ ಮತ್ತು ಹಿರಿಮೆ, ಗೌರವ, ಅಧಿಕಾರ, ಆಡಳಿತ ಮುಂತಾದವುಗಳ ಆಸೆಯು ಅತಿ ಹೆಚ್ಚು ಹಾನಿಯನ್ನು ಉಂಟು ಮಾಡಿತು. ಲೌಕಿಕ ವ್ಯಾಮೋಹವು ಅವರಲ್ಲಿ ವೈಮನಸ್ಸು

ಹುಟ್ಟಿಸಿತು. ಇದರ ಕಾರಣ ದೇಶದ್ರೋಹಿಗಳು ಮತ್ತು ಬಂಡುಕೋರರು ಹುಟ್ಟಿಕೊಂಡರು. ಮರಣೋತ್ತರ ಜೀವನದ ನಿರ್ಲಕ್ಷ್ಯದ ಕಾರಣ ಚಾರಿತ್ರ್ಯಹೀನರು ತುಂಬಿಕೊಂಡರು ಮತ್ತು ಅವರು ಸುಖ ಸಾಮರ್ಥ್ಯವನ್ನು ಕಳೆದುಕೊಂಡರು.

ಇನ್ನೊಂದು ಹದೀಸಿನಲ್ಲಿ ಪ್ರವಾದಿ ಮುಹಮ್ಮದರು(ಸ) ಈ ರೀತಿ ಹೇಳಿರುವರು-

"ಅಲ್ಲಾಹನಾಣೆ, ನೀವು ದಾರಿದ್ರ್ಯದಲ್ಲಿ ಸಿಲುಕುವಿರಿ ಎಂಬ ಭಯ ನನಗೆ ಇಲ್ಲ. ಆದರೆ ಹಿಂದಿನ ಜನಾಂಗದಂತೆ ನಿಮ್ಮ ಮೇಲೆ ಕೂಡ ಲೋಕದ ಶ್ರೀಮಂತಿಕೆಯು ವಿಸ್ತಾರಗೊಂಡು. ನೀವು ಕೂಡ ಅವರಂತೆ ಅದರ ವ್ಯಾಮೋಹದಲ್ಲಿ ಸಿಲುಕುವಿರಿ. ಅದು (ಪರಿಣಾಮ) ಅವರನ್ನು ನಾಶ ಮಾಡಿದಂತೆ ನಿಮ್ಮನ್ನು ನಾಶಪಡಿಸುವುದು ಎಂದು ಭಯಪಡುತ್ತೇನೆ. (ಮುಸ್ಲಿಮ್)

ಲೋಕದ ವ್ಯಾಮೋಹ, ಸಮುದಾಯಗಳ ನಾಶಕ್ಕೆ ಕಾರಣ ಎಂದು ಈ ಎರಡು ಹದೀಸ್‌ಗಳಿಂದ ತಿಳಿಯಬಹುದು. ದುರಾಸೆಯು ಹೆಚ್ಚಿದಂತೆ ಪರಲೋಕವನ್ನು ಮರೆಯ ಲಾಗುತ್ತದೆ. ಪರಲೋಕವನ್ನು ಮರೆತಾಗ, ಜನರಲ್ಲಿ ದುರಾಚಾರ, ಲೋಭ ಮತ್ತು ಕೆಡುಕುಗಳು ಹೆಚ್ಚುತ್ತದೆ. ಇದು ಸಮುದಾಯಗಳ ನಾಶದಲ್ಲಿ ಕೊನೆಗೊಳ್ಳುತ್ತದೆ. ಸಂಪತ್ತಿನ ವ್ಯಾಮೋಹವು ಎರಡು ರೀತಿಯ ದುರಾಚಾರಗಳಿಗೆ ಜನ್ಮ ಕೊಡುತ್ತದೆ. ಒಂದು ಸಂಪತ್ತಿನ ಆಧಿಕ್ಯದಿಂದ ಕೆಡುಕುಗಳು ಹುಟ್ಟುತ್ತವೆ. ಎರಡು ಪರಲೋಕವನ್ನು ಮರೆತು ಬಿಡುತ್ತಾನೆ. ಕೆಡುಕುಗಳ ಪರಿಣಾಮದ ಭಯ ನಾಶಗೊಂಡಂತೆ, ನಿರ್ಭೀತರಾಗಿ ಆ ದಾರಿಯನ್ನು ಆಕ್ರಮಿಸಲಾಗುತ್ತದೆ. ದಾರಿದ್ರ್ಯವೂ ಅನೇಕ ಕೆಡುಕುಗಳ ಬಾಗಿಲನ್ನು ತೆರೆಯುತ್ತದೆ. ಸಂಪತ್ತಿನ ಆಧಿಕ್ಯ ಹುಚ್ಚುತನ, ದಾರಿದ್ರ್ಯದಿಂದ ಹುಟ್ಟುವ ಮೊದಲ ಕೆಡುಕು. ದಾರಿದ್ರ್ಯವು ಸಮಾಜಕ್ಕೆ ಮಾಡುವ ಕೆಡುಕಿಗಿಂತ ಅಧಿಕ ಕೆಡುಕು ಸಂಪತ್ತಿನ ಹೇರಳದ ಹುಚ್ಚುತನದ ಪರಿಣಾಮ ಬಹಳ ಕೆಟ್ಟ ಮತ್ತು ದೂರಗಾಮಿ ಪರಿಣಾಮವಾಗಿದೆ. ಲೋಕವು ನಿಮ್ಮ ಮೇಲೆ ವಿಸ್ತರಿಸಿ, ನೀವು ಅದನ್ನು ಅತಿ ಹೆಚ್ಚು ಪ್ರೀತಿಸತೊಡಗಿದಾಗ ಹಿಂದಿನ ಹಲವು ಜನಾಂಗಗಳು ನಾಶಗೊಂಡಂತೆ ನೀವು ಕೂಡ ನಾಶಗೊಳ್ಳುವಿರಿ ಎಂದು ನನಗೆ ಭಯವಾಗುತ್ತದೆ ಎಂದು ಪ್ರವಾದಿ ಮುಹಮ್ಮದ್‌ರ(ಸ) ಮಾತಿನ ತಾತ್ಪರ್ಯ.

ಲೋಭಕ್ಕೆ ಇನ್ನೊಂದು ಪ್ರಮುಖ ಕಾರಣ ಅತಿ ಹೆಚ್ಚು ಬದುಕುವ ಆಸೆ ಮತ್ತು ಮರಣದಿಂದ ದ್ವೇಷ. ಆದರೂ ಜನಾಂಗಗಳಿಗೆ ಬದುಕುವುದಕ್ಕಿಂತ, ಅಲ್ಲಾಹನ ಮಾರ್ಗದಲ್ಲಿ ಪ್ರಾಣ ಅರ್ಪಿಸುವುದು ಉತ್ತಮವಾಗಿತ್ತು.

ಕಾರಣ, ದೇಶ ಮತ್ತು ದೇಶವಾಸಿಗಳ ಮೇಲೆ ಕೆಟ್ಟ ಸಮಯ ಬಂದಾಗ, ಜೀವಿಸುವ ಬದಲು ಅಲ್ಲಾಹನ ಮಾರ್ಗದಲ್ಲಿ ಪ್ರಾಣ ಅರ್ಪಿಸುವುದು ಉತ್ತಮ. ಜೀವನದೊಂದಿಗೆ ಅತಿಯಾದ ಪ್ರೀತಿ ಮತ್ತು ಮರಣದಿಂದ ಅತಿಯಾದ ದ್ವೇಷ ಕೂಡಾ ಲೋಭದ ಒಂದು ರೀತಿಯಾಗಿದೆ. ಪ್ರವಾದಿ ಮುಹಮ್ಮದ್‌ರು(ಸ) ಈ ಲೋಭದ ಬಗ್ಗೆಯೂ ತಿಳಿಸಿದ್ದಾರೆ.

ಹ. ಸೌಬಾನ್(ರ) ವರದಿ ಮಾಡುತ್ತಾರೆ. ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು, "ಹಸಿದವರು ಊಟದ ತಟ್ಟೆಯ ಮೇಲೆ ಮುಗಿ ಬೀಳುವಂತೆ (ಮುಸ್ಲಿಮೇತರ) ಜನಾಂಗಗಳು ನಿಮ್ಮ ಮೇಲೆ ಮುಗಿ ಬೀಳುವ ಕಾಲವೊಂದು ಶೀಘ್ರವೇ ಬರಲಿದೆ." "ಆಗ ನಮ್ಮ ಜನಸಂಖ್ಯೆ ಬಹಳ ಕಡಿಮೆ ಇರುವುದೇ?" ಎಂದು ಒಬ್ಬರು ಪ್ರಶ್ನಿಸಿದರು. "ಇಲ್ಲ! ಆ ಕಾಲದಲ್ಲಿ ನಿಮ್ಮ ಜನಸಂಖ್ಯೆ ಹೆಚ್ಚಿರುವುದು. ಆದರೆ ಆಗ ನಿಮ್ಮ ಸ್ಥಿತಿ ಬಿರುಗಾಳಿಗೆ ಸಿಕ್ಕ ಕಸ ಕಡ್ಡಿಯಂತೆ ಇರುವುದು ಮತ್ತು ವೈರಿಗಳ ಹೃದಯದಿಂದ ನಿಮ್ಮ ಭಯ ತೆಗೆದು ಬಿಡಲಾಗುವುದು ಮತ್ತು ನಿಮ್ಮನ್ನು ದುರ್ಬಲರನ್ನಾಗಿ ಮಾಡಲಾಗುವುದು" ಎಂದು ಪ್ರವಾದಿ ಮುಹಮ್ಮದ್‌ರು(ಸ) ಉತ್ತರಿಸಿದರು. ಯಾವ ತರಹದ ದುರ್ಬಲತೆ ಎಂದು ಆತ ಪುನಃ ಪ್ರಶ್ನಿಸಿದ. "ಲೋಕದ ಮೋಹ ಮತ್ತು ಮರಣದ ಬಗೆಗಿನ ದ್ವೇಷ" ಎಂದು ಪ್ರವಾದಿ ಮುಹಮ್ಮದ್‌ರು(ಸ) ಉತ್ತರಿಸಿದರು. (ಅಬೂದಾವೂದ್)

ಅರ್ಥಾತ್, ನಿಮ್ಮಲ್ಲಿ ಲೋಕದ ವ್ಯಾಮೋಹ ಮತ್ತು ಮರಣದ ಬಗ್ಗೆ ದ್ವೇಷ ಹೆಚ್ಚಿದಾಗ, ನಿಮ್ಮ ಮನಸ್ಸು ದುರ್ಬಲಗೊಳ್ಳುವುದು. ಮನಸ್ಸು ದುರ್ಬಲಗೊಂಡಾಗ, ಜನರು ನಿಮ್ಮ ದುರ್ಬಲತೆಯನ್ನು ಅರಿತು, ಊಟದ ತಟ್ಟೆಯ ಮೇಲೆ ಮುಗಿ ಬೀಳುವಂತೆ ನಿಮ್ಮ ಮೇಲೆ ಮುಗಿ ಬೀಳುವರು.

ಲೋಕದ ವ್ಯಾಮೋಹದ ಆಧಿಕ್ಯ ಮತ್ತು ಮರಣದಿಂದ ದ್ವೇಷ, ಸಮುದಾಯಗಳ ಹೃದಯದಲ್ಲಿ ಧರ್ಮಯುದ್ಧದ ಆವೇಶವನ್ನು ಕ್ಷೀಣಿಸುತ್ತದೆ ಮತ್ತು ಶಾಶ್ವತ ಬದುಕು ಅವರ ಬಯಕೆ ಆಗುತ್ತದೆ. ಗೌರವದ ಮರಣಕ್ಕಿಂತ ಅಪಮಾನದ ಬದುಕನ್ನು ಅವರು ಪ್ರೀತಿಸುತ್ತಾರೆ. ಇದರ ಪರಿಣಾಮ ಅವರ ಮನಸ್ಸಿನಿಂದ ಪರಾಕ್ರಮ ಮತ್ತು ಶೌರ್ಯ ಬಲಿದಾನಗಳ ಭಾವನೆ, ತನ್ನ ಸಮುದಾಯ ಬಾಂಧವರ ಮೇಲಿನ ಪ್ರೀತಿ, ಸಮುದಾಯವನ್ನು ಉತ್ತುಂಗತೆಗೆ ಏರಿಸುವ ಹಂಬಲ, ಸದ್ಗುಣ ಮುಂತಾದವು ಅಳಿದು ಹೋಗುತ್ತದೆ. ಹೇಡಿತನವು ತುಂಬುತ್ತದೆ. ಇದರಿಂದ ಸಮುದಾಯದ ಐಕ್ಯತೆ ದುರ್ಬಲಗೊಂಡು ಇತರ ಸಮುದಾಯಗಳು ನಮ್ಮ ಮೇಲೆ ಎರಗುವುದರಲ್ಲಿ ಸಂದೇಹವಿಲ್ಲ.

ಲೋಕದ ಮೋಹ ವಿಮುಕ್ತ ವ್ಯಕ್ತಿಯನ್ನು ಬುದ್ಧಿವಂತನೆಂದು ಹೇಳಲಾಗಿದೆ. ಸಹಾಬಿ ಹ. ಅಬೂ ಖಲ್ಲಾದ್‌ರ(ರ) ವರದಿ- ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿದ್ದರು. "ಲೋಕದ ವ್ಯಾಮೋಹ ಇಲ್ಲದವನನ್ನು ಮತ್ತು ಮಿತ ಭಾಷಿಗನನ್ನು ಕಂಡಾಗ, ಆತನ ಸ್ನೇಹ ಬೆಳೆಸಿ. ಕಾರಣ, ಆತನ ಮನಸ್ಸನ್ನು ಬುದ್ಧಿವಂತಿಕೆಯಿಂದ ತುಂಬಲಾಗಿರುತ್ತದೆ. (ಇಬ್ನುಮಾಜಃ)

ಲೌಕಿಕ ಸಂಪತ್ತು ಮತ್ತು ವೈಭವಗಳ ವ್ಯಾಮೋಹ ಇದ್ದವನ ಬಗ್ಗೆ ಪ್ರವಾದಿ ಮುಹಮ್ಮದರು(ಸ) ಬಹಳ ಕಟುವಾದ ಮಾತನ್ನು ಉಪಯೋಗಿಸಿರುವರು. ಹ. ಅಬೂಹುರೈರಾ(ರ) ಉಲ್ಲೇಖಿಸುತ್ತಾರೆ- ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು.

"ನಾಶ ಹೊಂದಲಿ ದೀನಾರ್ ಮತ್ತು ದಿರ್ಹಮ್‌ನ ದಾಸ ಮತ್ತು ಅಂಚಿರುವ ನಿಲುವಂಗಿಯ ದಾಸ. ಅವನು (ನರಕದಲ್ಲಿ) ಬೋರಲಾಗಿ ಬೀಳಲಿ ಮತ್ತು ಆತನಿಗೆ ಮುಳ್ಳು ಚುಚ್ಚಿದಾಗ, ತೆಗೆಯಲಾಗದ ಸ್ಥಿತಿಯಲ್ಲಿ ಇರಲಿ" (ಇಬ್ನುಮಾಜಃ)

ಇನ್ನೊಂದು ಹದೀಸಿನಲ್ಲಿ ಹ. ಅಬೂಹುರೈರಾ(ರ) ವರದಿ ಮಾಡುತ್ತಾರೆ- ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು. "ನಾಶ ಹೊಂದಲಿ ನಾಣ್ಯಗಳ ದಾಸ, ಸಂಪತ್ತಿನ ದಾಸ, ರೇಷ್ಮೆ ಬಟ್ಟೆಯ ದಾಸ ಮತ್ತು ಅಂಚಿರುವ ನಿಲುವಂಗಿಯ ದಾಸ. ಆತನಿಗೆ ಕೊಟ್ಟಾಗ ಆತ ಸಂತುಷ್ಟನಾಗುತ್ತಾನೆ ಮತ್ತು ಕೊಡದಿದ್ದಾಗ ಕೋಪಗೊಳ್ಳುತ್ತಾನೆ. (ಬುಖಾರಿ)

ಎಂದರೆ ಅವನು ಕೋಪಗೊಳ್ಳುವುದು ಮತ್ತು ಸಂತೋಷಗೊಳ್ಳುವುದು ಕೂಡ ಅವನಿಗೆ ಸಂಪತ್ತು ಸಿಗುವುದನ್ನು ಅಥವಾ ಸಿಗದಿರುವುದನ್ನು ಅವಲಂಬಿಸಿದೆ. ಈ ಹದೀಸಿನಲ್ಲಿ ಹೇಳಲಾದ ರೇಶ್ಮೆ ಚಾದರ ಮತ್ತು ಅಂಚಿರುವ ನಿಲುವಂಗಿ ಎಂದರೆ ಅತ್ಯುನ್ನತ ದರ್ಜೆಯ ವಸ್ತ್ರ ಮತ್ತು ಇತರ ವಸ್ತುಗಳು. ಆತ ಈ ಎಲ್ಲ ವಸ್ತುಗಳ ಅತ್ಯಧಿಕ ವ್ಯಾಮೋಹ ಉಳ್ಳವನು ಎಂಬುದು ಇದರ ಅರ್ಥ.

# ದುರಾಸೆಯ ದುಷ್ಪರಿಣಾಮಗಳು

ವಿಪರೀತ ವ್ಯಾಮೋಹ ಅನೇಕ ದುಷ್ಕರ್ಮಗಳಿಗೆ ಜನ್ಮ ಕೊಡುತ್ತದೆ. ಈ ಬಗ್ಗೆ ಹಲವಾರು ಧರ್ಮಾದೇಶಗಳು ಇದ್ದರೂ, ನಾವು ಅದನ್ನು ನಿರ್ಲಕ್ಷಿಸಿ, ಧರ್ಮ ಮತ್ತು ಲೌಕಿಕ ಬದುಕನ್ನು ಹಾಳು ಮಾಡುತ್ತೇವೆ.

إِنَّ الْإِنسَانَ لِرَبِّهِ لَكَنُودٌ ﴿٦﴾ وَإِنَّهُ عَلَىٰ ذَٰلِكَ لَشَهِيدٌ ﴿٧﴾ وَإِنَّهُ لِحُبِّ الْخَيْرِ لَشَدِيدٌ ﴿٨﴾

"ವಾಸ್ತವದಲ್ಲಿ ಮಾನವನು ತನ್ನ ಪ್ರಭುವಿಗೆ ಬಹಳ ಕೃತಘ್ನನಾಗಿದ್ದಾನೆ. ಮತ್ತು ಇದಕ್ಕೆ ಸ್ವತಃ ಅವನೇ ಸಾಕ್ಷಿಯಾಗಿದ್ದಾನೆ. ಅವನು ಧನ ಕನಕಗಳ ಅತಿಯಾದ ಮೋಹದಲ್ಲಿ ಸಿಲುಕಿ ಕೊಂಡಿದ್ದಾನೆ." (ಪವಿತ್ರ ಕುರ್‌ಆನ್, 100:6-8)

ಇಲ್ಲಿ ಲೌಕಿಕ, ವ್ಯಾಮೋಹ, ವೈಭವ ಮತ್ತು ಐಷಾರಾಮಗಳ ಮೋಹದಲ್ಲಿ ಸಿಲುಕಿರುವವರ ಬಗ್ಗೆ ಪ್ರಸ್ತಾಪಿಸುವಾಗ, ಅಲ್ಲಾಹನು ಇಂತಹವರನ್ನು ಇಷ್ಟಪಡುವುದಿಲ್ಲ ಎಂದು ಅರಿವಾಗುತ್ತದೆ.

ಲೌಕಿಕ ವ್ಯಾಮೋಹದ ಬಗ್ಗೆ ಪ್ರವಾದಿ ಮುಹಮ್ಮದ್‌ರು(ಸ) ಹೀಗೆ ಹೇಳಿರುವರು ಎಂದು ಹ. ಅಬೂಹುರೈರಾ(ರ) ವರದಿ ಮಾಡುತ್ತಾರೆ.

"ದಾಸನು ನನ್ನ ಸಂಪತ್ತು, ನನ್ನ ಸಂಪತ್ತು ಎಂದು ಹೇಳುತ್ತಾನೆ. ಆದರೆ ಆ ಸಂಪತ್ತಿನಲ್ಲಿ 3 ವಸ್ತುಗಳು ಮಾತ್ರ ಅವನದಾಗಿದೆ. (ಅಂದರೆ) ಆತ ತಿಂದು ಮುಗಿಸಿದುದು, ಉಟ್ಟು ಹಳೆಯದಾದದ್ದು ಅಥವಾ ದಾನ ಮಾಡಿದ್ದು (ಅಲ್ಲಾಹನ ದಾರಿಯಲ್ಲಿ). ಇದರ ಹೊರತು (ತನಗಾಗಿ ಕೂಡಿಟ್ಟ) ಉಳಿದ ಸಂಪತ್ತು ಎಲ್ಲ (ಏನಾಗುವುದೆಂದರೆ) ಮರಣಾನಂತರ ಇತರರಿಗಾಗಿ ಬಿಟ್ಟು ಹೋಗುವನು. (ಮುಸ್ಲಿಮ್)

ಅರ್ಥಾತ್- ಮನುಷ್ಯ ಕೂಡಿಟ್ಟ ಸಂಪತ್ತಿನ ರಾಶಿಯಲ್ಲಿ, ತನ್ನ ಮೇಲೆ ಖರ್ಚು ಮಾಡಿದ್ದು ಅಥವಾ ಪರಲೋಕ ಜೀವನಕ್ಕಾಗಿ ಅಲ್ಲಾಹನ ಹಾದಿಯಲ್ಲಿ ಖರ್ಚು ಮಾಡಿದುದರ ಹೊರತು, ಆತ ಶೇಖರಿಸಿದ ಸಂಪತ್ತು (ವಾರೀಸುದಾರರಲ್ಲಿ) ವಾರೀಸು ಹಕ್ಕಿನ ರೂಪದಲ್ಲಿ ಹಂಚಲ್ಪಡುವುದು.

ಹ.ಇಬ್ನು ಅಬ್ಬಾಸ್(ರ) ಉಲ್ಲೇಖಿಸುತ್ತಾರೆ:- "ಅಲ್ಲಾಹನ ಪ್ರವಾದಿ ಮುಹಮ್ಮದ್‌ರು(ಸ) ಹೀಗೆ ಹೇಳುವುದನ್ನು ನಾನು ಕೇಳಿದ್ದೇನೆ. ಆದಮನ ಮಗನೊಡನೆ ಸಂಪತ್ತಿನ ಎರಡು ಕಣಿವೆಗಳಿದ್ದರೂ, ಆತ ಮೂರನೆಯದನ್ನು ಹುಡುಕುವನು. ಆದಮನ ಮಗನ ಹೊಟ್ಟೆ ಕೇವಲ ಮಣ್ಣಿನಿಂದ ತುಂಬುವುದು ಮತ್ತು ಯಾರು ಪಶ್ಚಾತ್ತಾಪಡುವನೋ ಅವನ ಪಶ್ಚಾತ್ತಾಪ ಸ್ವೀಕೃತಗೊಳ್ಳುವುದು. (ಬುಖಾರಿ)

ಇಲ್ಲಿ ಮಣ್ಣು ಎಂದರೆ ಗೋರಿಯ ಮಣ್ಣು ಎಂದಾಗಿದೆ. ಎಂದರೆ ಮನುಷ್ಯನ ಬದುಕಿನ ಉದ್ದಕ್ಕೂ ಸಂಪತ್ತಿನ ರಾಶಿಯಿದ್ದರೂ, ಇನ್ನೂ ಹೆಚ್ಚಿನದ್ದಕ್ಕೆ ಆಶಿಸುತ್ತಾನೆ. ಈ ಆಸೆಯ ಕೊನೆ ಆತ ಮರಣ ಹೊಂದಿ ಗೋರಿ ಸೇರಿದಾಗ ಮಾತ್ರ ಮುಗಿಯುತ್ತದೆ.

ಹ. ಅಬೂಹುರೈರಾ(ರ) ಪ್ರವಾದಿ ಮುಹಮ್ಮದ್‌ರ(ಸ) ಕಡೆಯಿಂದ ಈ ರೀತಿ ವರದಿ ಮಾಡುತ್ತಾರೆ: "ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು, ಮುದುಕನ ಮನಸ್ಸು ಎರಡು ವಿಷಯಗಳ ಕುರಿತು ಯುವತ್ವದಿಂದ ಕೂಡಿರುತ್ತದೆ. (ಒಂದು) ಬದುಕುವ ಆಸೆ ಮತ್ತು (ಎರಡನೆಯದು) ಸಂಪತ್ತಿನ ಆಸೆ" (ಮುಸ್ಲಿಮ್)

ಮನುಷ್ಯನಿಗೆ ವಯಸ್ಸಾದಂತೆ, ಮರಣೋತ್ತರ ಜೀವನದ ಬಗ್ಗೆ ಚಿಂತಿಸುವುದು ಸ್ವಾಭಾವಿಕ. ಆದರೆ ಮುದುಕನಾದಂತೆ ಮನುಷ್ಯನಲ್ಲಿ ಜೀವಿಸುವ ಆಸೆ ಮುಗಿಯದಿರುವುದು ವಿಚಿತ್ರ. ಅಲ್ಲಾಹನು ಇಚ್ಛಿಸಿದುದರ ಹೊರತು ಇಲ್ಲಿಯೂ ಮನುಷ್ಯ ವಯಸ್ಕನಾದರೂ ಮುಗಿಯದಂತಹ ಆಸೆಯ ಕಡೆಗೆ ವಾಲುತ್ತಾನೆ ಎಂಬುದು ಕಟು ಸತ್ಯ.

ಹ. ಅಬೂಹುರೈರಾ(ರ) ಪ್ರವಾದಿ ಮುಹಮ್ಮದ್‌ರು(ಸ) ಹೀಗೆ ಹೇಳಿರುವರು ಎಂದು ವರದಿ ಮಾಡುತ್ತಾರೆ. "ಕರಾಳ ರಾತ್ರಿಯ ತುಣುಕುಗಳಂತಿರುವ ಪರೀಕ್ಷೆಗಳು ಎದುರಾಗುವುದಕ್ಕಿಂತ ಮುಂಚೆ (ಉತ್ತಮ) ಕರ್ಮಗಳನ್ನು ಮಾಡಿ. (ಆ ಸಮಯ) ಬೆಳಿಗ್ಗೆ ಮೂಮಿನ್ ಆಗಿರುವಾತ, ಸಂಜೆ ಕಾಫಿರ್ ಆಗುವನು. ಬೆಳಿಗ್ಗೆ ಕಾಫಿರ್ ಆಗಿರುವಾತ, ಸಂಜೆ ಮೂಮಿನ್ ಆಗುವನು. ಲೌಕಿಕ ವಸ್ತುಗಳನ್ನು ಪಡೆಯಲು ಮನುಷ್ಯ ತನ್ನ ಧರ್ಮವನ್ನು ಮಾರಿ ಬಿಡುವನು." (ಮುಸ್ಲಿಮ್)

ಈ ಹದೀಸಿನಲ್ಲಿ ಭವಿಷ್ಯವಾಣಿಯನ್ನು ಹೇಳಲಾದರೂ, ಅದರೊಂದಿಗೆ ಇಂತಹ ಪರಿಸ್ಥಿತಿ ಸಂಭವಿಸಿದಾಗ, ನೀವು ಲೌಕಿಕ ವಸ್ತುಗಳನ್ನು ವ್ಯಾಮೋಹದಿಂದ ತಮ್ಮನ್ನು ರಕ್ಷಿಸಿ, ಧರ್ಮದ ರಕ್ಷಣೆಯನ್ನು ಮಾಡಬೇಕು ಎಂಬ ಎಚ್ಚರಿಕೆಯನ್ನು ಕೊಡಲಾಗಿದೆ.

ಪ್ರವಾದಿ ಮುಹಮ್ಮದ್‌ರು(ಸ) ಎಲ್ಲಾ ರೀತಿಯ ವ್ಯಾಮೋಹ ಮತ್ತು ದುರಾಸೆಗಳನ್ನು ಖಂಡಿಸಿದ್ದಾರೆ. ಇನ್ನು ದುರಾಸೆಯಿಂದ ಸಂಭವಿಸುವ ದುರ್ಗುಣಗಳ ಕಡೆ ಗಮನ ಹರಿಸುವ.

## ವಿಶ್ವಾಸಘಾತಕತನ ಮತ್ತು ವಂಚನೆ

ಸೂರಃ ಅನ್ನಿಸಾ 29ನೆಯ ಸೂಕ್ತದಲ್ಲಿ ಹೀಗೆ ಹೇಳಲಾಗಿದೆ:

يَاَيُّهَا الَّذِيْنَ اٰمَنُوْا لَا تَاْكُلُوْٓا اَمْوَالَكُمْ بَيْنَكُمْ بِالْبَاطِلِ

"ಓ ಸತ್ಯವಿಶ್ವಾಸಿಗಳೇ, ನೀವು ಪರಸ್ಪರರ ಸಂಪತ್ತನ್ನು ಅನುಚಿತ ರೀತಿಯಿಂದ ಕಬಳಿಸಬೇಡಿರಿ."

"ಅನುಚಿತ ರೀತಿ" ಎಂದರೆ, ಇಸ್ಲಾಮ್ ನಿಷೇಧಿಸುವ ಎಲ್ಲ ಮಾರ್ಗವಾಗಿದೆ. ಅದರಲ್ಲಿ ಕೆಲವನ್ನು ಇಲ್ಲಿ ಪ್ರಸ್ತಾಪಿಸಲಾಗುವುದು. ಸೂರಃ ಅನ್‌ಫಾಲ್, 27ನೆಯ ಸೂಕ್ತದಲ್ಲಿ ಅಲ್ಲಾಹ್, ಅಲ್ಲಾಹನ ಪ್ರವಾದಿ ಮತ್ತು ಮಾನವೀಯ ವ್ಯವಹಾರಗಳಲ್ಲಿ ವಂಚನೆ ಮಾಡಬೇಡಿರಿ ಎಂಬ ಎಚ್ಚರಿಕೆಯನ್ನು ಕೊಡಲಾಗಿದೆ.

يَاَيُّهَا الَّذِيْنَ اٰمَنُوْا لَا تَخُوْنُوا اللّٰهَ وَالرَّسُوْلَ وَتَخُوْنُوْٓا اَمٰنٰتِكُمْ وَاَنْتُمْ تَعْلَمُوْنَ

"ಓ ಸತ್ಯವಿಶ್ವಾಸಿಗಳೇ, ತಿಳುವಳಿಕೆ ಇದ್ದೂ ಅಲ್ಲಾಹ್ ಮತ್ತು ರಸೂಲರೊಂದಿಗೆ ವಿಶ್ವಾಸಘಾತಕವೆಸಗಬೇಡಿರಿ ಮತ್ತು ನಿಮ್ಮ ಅಮಾನತ್ (ವಿಶ್ವಸ್ಥನಿಧಿ)ಗಳಲ್ಲಿ ವಿದ್ರೋಹ ವೆಸಗಬೇಡಿರಿ."

ಅದೇ ರೀತಿ, ಪ್ರವಾದಿ ಮುಹಮ್ಮದ್‌ರು(ಸ) ಅಪ್ರಾಮಾಣಿಕತೆ ಮತ್ತು ವಿಶ್ವಾಸ ಘಾತಕತನವನ್ನು ಕಟುವಾಗಿ ಖಂಡಿಸಿರುವರು. ಹ.ಅಬೂದರ್(ರ) ವರದಿ ಮಾಡುತ್ತಾರೆ.

"ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳುವುದನ್ನು ನಾನು ಕೇಳಿದ್ದೇನೆ- ಉದ್ದೇಶಪೂರ್ವಕವಾಗಿ ಯಾರಾದರೂ ನಾನು ಇಂತಹವರ ಮಗ ಎಂದು ಸುಳ್ಳು ವಾದಿಸಿದರೆ, ಆತ ಕೃತಘ್ನ(ಕಾಫಿರ್)ನಾದನು ಮತ್ತು ಉದ್ದೇಶಪೂರ್ವಕ ಯಾರಾದರೂ ಇದು ನನ್ನ ಸಂಪತ್ತು ಎಂಬ ವಾದಿಸಿದರೆ (ನಿಜವಾಗಿಯೂ) ಆ ಸಂಪತ್ತು ಅವನದಲ್ಲದಿದ್ದರೆ, ಆತ ನಮ್ಮವನಲ್ಲ.... ಮತ್ತು ಆತ ನರಕವನ್ನು ತನ್ನ ವಾಸಸ್ಥಳವನ್ನಾಗಿ ಮಾಡಲಿ ಯಾರಾದರೂ ಯಾರನ್ನಾದರೂ ಕಾಫಿರ್ ಅಥವಾ ಅಲ್ಲಾಹನ ವೈರಿ ಎಂದು ಕರೆದರೆ, ಮತ್ತು ಆತ ನಿಜವಾಗಿ ಹಾಗಿರದಿದ್ದರೆ, ಅದು ಹೇಳಿದವನ ಕಡೆಗೇ ತಿರುಗುವುದು.

(ಮುಸ್ಲಿಮ್)

ವಿಶ್ವಾಸಘಾತಕ ಎಂದರೆ, ಮನುಷ್ಯ ತನ್ನದಲ್ಲದ ವಸ್ತುವಿನ ಮಾಲಕತ್ವವನ್ನು ಸಾರುವುದು ಅಥವಾ ಮಾಲಿಕನಾಗುವುದು. ಸಹೀಹ್ ಬುಖಾರಿಯಲ್ಲಿ ಒಂದು ಹದೀಸಿನ ಕೊನೆಯ ಭಾಗದಲ್ಲಿ ಈ ರೀತಿ ಹೇಳಲಾಗಿದೆ. "ಯಾರಾದರೂ ಇತರರ ಸೊತ್ತನ್ನು ಅನುಮತಿ ಇಲ್ಲದೆ ತೆಗೆದರೆ, ಆತ ಹೊಟ್ಟೆ ತುಂಬ ಉಂಡರೂ, ಹೊಟ್ಟೆ ಖಾಲಿ ಇಟ್ಟವನಂತೆ, ಪುನರುತ್ಥಾನದ ದಿನದಂದು ಆ ಸೊತ್ತು ಆತನ ವಿರುದ್ಧ ಸಾಕ್ಷಿ ಹೇಳುವುದು.

ಎಂದರೆ, ಈತನಿಗೆ ನನ್ನ ಮೇಲೆ ಯಾವುದೇ ರೀತಿ ಹಕ್ಕು ಇರಲಿಲ್ಲ ಈತ ನನ್ನನ್ನು ಕಬಳಿಸಿದ್ದಾನೆ ಎಂದು ಅದು ಸಾಕ್ಷ್ಯ ವಹಿಸುವುದು" ಎಂದು ಪ್ರವಾದಿ ಮುಹಮ್ಮದ್‌ರು(ಸ) ಹೇಳಿರುವರು.

ದೊಡ್ಡ ದೊಡ್ಡ ವಸ್ತುಗಳನ್ನು ಕಬಳಿಸುವುದು ಮಾತ್ರ ವಂಚನೆಯಲ್ಲ. ಸಣ್ಣ ಪುಟ್ಟ ವಸ್ತುಗಳನ್ನು ಕೂಡ ಅನುಮತಿ ಇಲ್ಲದೆ ತೆಗೆಯುವುದು ಕೂಡ ವಂಚನೆಯಾಗಿದೆ.

ಹ.ಉಮಾಮ(ರ) ಪ್ರವಾದಿ ಮುಹಮ್ಮದ್‌ರು(ಸ) ಹೀಗೆ ಹೇಳಿರುವರು ಎಂದು ವರದಿ ಮಾಡುತ್ತಾರೆ.

"ಸುಳ್ಳು ಆಣೆ ಹಾಕಿ ಮುಸ್ಲಿಮನ ಹಕ್ಕನ್ನು ಕಬಳಿಸಿದವನ ಮೇಲೆ ಅಲ್ಲಾಹನು ನರಕವನ್ನು ಕಡ್ಡಾಯಗೊಳಿಸಿದನು ಮತ್ತು ಸ್ವರ್ಗವನ್ನು ನಿಷಿದ್ಧಗೊಳಿಸಿದನು." ಇದನ್ನು ಕೇಳುತ್ತಿದ್ದ ಒಬ್ಬರು ಪ್ರವಾದಿ ಮುಹಮ್ಮದ್‌ನೊಡನೆ(ಸ), "ಒಂದು ವೇಳೆ ಆ ವಸ್ತು ಒಂದು ತುಚ್ಛ ವಸ್ತು ಆಗಿದ್ದರೆ?" ಎಂದು ಪ್ರಶ್ನಿಸಿದರು. "ಅದು ತುಚ್ಛ ಮರದ ಕೊಂಬೆ ಆದರೂ ಸರಿ" ಎಂದು ಪ್ರವಾದಿ ಮುಹಮ್ಮದ್‌ರು(ಸ) ಉತ್ತರಿಸಿದರು. (ಮುಸ್ಲಿಮ್)

ವಂಚನೆ ಒಂದು ಸಾಧಾರಣ ವಸ್ತುವಿನ ಬಗೆಗಾಗಿದ್ದರೂ ಅದು ವಂಚನೆಯೇ ಆಗಿದೆ. ವಂಚಿಸುವಾಗ ವಂಚಿಸುವವನ ಹೃದಯವು ಅಲ್ಲಾಹನ ಭಯದಿಂದ ಬರಿದಾಗಿರುತ್ತದೆ. ನಿರ್ಭೀತ ವ್ಯಕ್ತಿ ಮೊದಲು ಸಣ್ಣ ಪುಟ್ಟ ವಸ್ತುಗಳಿಂದ ಪ್ರಾರಂಭಿಸಿದ ವಂಚನೆ, ಕಾಲ ಕ್ರಮೇಣ ದೊಡ್ಡ ವಂಚನೆಯಲ್ಲಿ ತೊಡಗುತ್ತಾರೆ. ಅಂದರೆ ಸಣ್ಣ ಪುಟ್ಟ ಪಾಪಗಳನ್ನು ಮಾಡಿ ನಿರ್ಭೀತನಾದ ವ್ಯಕ್ತಿ, ಕಾಲಕ್ರಮೇಣ ಬಹಳ ಸುಲಭದಿಂದ ದೊಡ್ಡ ಪಾಪಗಳಲ್ಲಿ ತೊಡಗುತ್ತಾನೆ. ಅದೇ ರೀತಿ, ಸಣ್ಣಪುಟ್ಟ ವಂಚನೆಗಳಿಂದ ವ್ಯಕ್ತಿ ತನ್ನನ್ನು ತಡೆಯದಿದ್ದರೆ, ಕಾಲಕ್ರಮೇಣ ದೊಡ್ಡ ವಂಚನೆಗಳ ಹವ್ಯಾಸಿ ಆಗುತ್ತಾನೆ.

ಕೆಲವರು, ಇತರರ ಹಾಲು ಕೊಡುವ ಜಾನುವಾರುಗಳಿಂದ ಹಾಲು ಕದಿಯುತ್ತಾರೆ, ಅಥವಾ ಕೋಳಿ ಮೊಟ್ಟೆ ಕದಿಯುತ್ತಾರೆ. ಇದು ಕೂಡ ವಂಚನೆಯ ಒಂದು ರೂಪವಾಗಿದೆ.

ಹ. ಅಬ್ದುಲ್ಲಾ ಬಿನ್ ಅಮ್ರ್, ಪ್ರವಾದಿ ಮುಹಮ್ಮದ್‌ರಿಂದ(ಸ) ಹೀಗೆ ವರದಿ ಮಾಡುತ್ತಾರೆ-

"ಯಾರು ಕೂಡ, ಇನ್ನೊಬ್ಬರ ಪ್ರಾಣಿಯ ಹಾಲನ್ನು, ಮಾಲೀಕನ ಅನುಮತಿ ಇಲ್ಲದೆ ಕರೆಯಬಾರದು. ಯಾರಾದರೂ, ನಿಮ್ಮ ಧಾನ್ಯದ ಗೋದಾಮಿಗೆ ಹೊಕ್ಕು, ಅದನ್ನು ಕೊಳ್ಳೆ ಹೊಡೆಯುವುದನ್ನು ನೀವು ಇಷ್ಟಪಡುವಿರಾ? ಆದುದರಿಂದ (ಎಚ್ಚರ ವಹಿಸಿ) ಜನರ ಪ್ರಾಣಿಗಳ ಕೆಚ್ಚಲಲ್ಲಿ ಇತರರ ಆಹಾರದ ಖಜಾನೆಯನ್ನು ಸಂಗ್ರಹಿಸಲಾಗಿದೆ. ಆದ್ದರಿಂದ, ಯಾರು ಕೂಡ ಪ್ರಾಣಿಯ ಮಾಲೀಕನ ಅನುಮತಿ ಇಲ್ಲದೆ ಹಾಲು ಕರೆಯಬೇಡಿ"

(ಬುಖಾರಿ)

ಹ. ಅಬ್ದುಲ್ಲಾ ಬಿನ್ ಅಮ್ರ್(ರ) ಉಲ್ಲೇಖಿಸುತ್ತಾರೆ.

ಒಮ್ಮೆ ಪ್ರವಾದಿ ಮುಹಮ್ಮದ್‌ರ(ಸ) ವಸ್ತುವಿನ ರಕ್ಷಣೆಗಾಗಿ, ಓರ್ವನನ್ನು ನೇಮಿಸಲಾಗಿತ್ತು. ಆತ ತೀರಿಕೊಂಡಾಗ, ಆತ ನರಕದಲ್ಲಿ ಇದ್ದಾನೆ ಎಂದು ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು. ಜನರು ಆತನನ್ನು ನೋಡಲು ಹೋದಾಗ, ಆತನ ಹತ್ತಿರ ಆತ ವಂಚಿಸಿ ಪಡೆದ ಒಂದು ಜುಬ್ಬವನ್ನು ಇಡಲಾಗಿತ್ತು. (ಬುಖಾರಿ)

ಒಂದು ಸಾಧಾರಣ ಜುಬ್ಬದ ವಂಚನೆಗೆ ನರಕವೆಂದಾದರೆ, ದೊಡ್ಡ ದೊಡ್ಡ ವಂಚನೆಯ ಶಿಕ್ಷೆ ಏನಾಗಿರಬಹುದು.

ಸಾಲಿಹ್ ತಮ್ಮ ತಂದೆಯಿಂದ ವರದಿ ಮಾಡುತ್ತಾರೆ. "ಯಾರಾದರೂ, ಇನ್ನೊಬ್ಬರ ಒಂದು ಗೇಣಿನಷ್ಟು ಜಮೀನನ್ನು ಕಬಳಿಸಿದರೆ, ಆತ ಪುನರುತ್ಥಾನದ ದಿನದಂದು, ಏಳು ಭೂಮಿಗಳ ತನಕ ಹೂಳಲ್ಪಡುವನು" ಎಂದು ಪ್ರವಾದಿ ಮುಹಮ್ಮದ್‌ರು(ಸ) ಹೇಳಿರುವರು ಎಂದು ಹೇಳುತ್ತಾರೆ. (ಬುಖಾರಿ)

ಅಬೂ ಸಲಮ ಬಿನ್ ಅಬ್ದುಲ್ ರಹ್ಮಾನ್(ರ) ವರದಿ ಮಾಡುತ್ತಾರೆ.

"ಅವರು ಮತ್ತು ಇನ್ನು ಕೆಲವರ ನಡುವೆ ಆಸ್ತಿಯ ಕುರಿತು ಜಗಳ ಆಯಿತು. ಅವರು ಹ. ಆಯಿಶಾರೊಡನೆ(ರ) ಹೋಗಿ, ಆ ಬಗ್ಗೆ ದೂರಿದರು. ಹ. ಆಯಿಶಾರು(ರ) ಓ ಅಬೂ ಸಲಮ(ರ) ಆಸ್ತಿಯಿಂದ ನೀವು ನಿಮ್ಮನ್ನು ರಕ್ಷಿಸಿಕೊಳ್ಳಿ. ಏಕೆಂದರೆ, ಯಾರದಾದರೂ ಒಂದು ಅಂಗುಲದಷ್ಟು ಭೂಮಿಯನ್ನು ಕಬಳಿಸಿದರೆ, ಆತನ ಕೊರಳಲ್ಲಿ ಏಳು ಭೂಮಿಗಳ ಕೋಳವನ್ನು ಹಾಕಲಾಗುವುದು ಎಂದು ಪ್ರವಾದಿ ಮುಹಮ್ಮದ್‌ರು(ಸ) ಹೇಳುವುದನ್ನು ನಾನು ಕೇಳಿದ್ದೇನೆ ಎಂದು ಹೇಳಿದರು.

(ಬುಖಾರಿ)

ಅದೇ ರೀತಿ, ಪ್ರವಾದಿ ಮುಹಮ್ಮದ್‌ರು(ಸ) ಹೀಗೆ ಹೇಳಿರುವರು ಎಂದು ಹ. ಅಬೂ ಹುರೈರಾ(ರ) ಉಲ್ಲೇಖಿಸುತ್ತಾರೆ.

ಕಪಟ ವಿಶ್ವಾಸಿಯಲ್ಲಿ ಮೂರು ಗುಣಗಳಿವೆ.

1. ಮಾತನಾಡುವಾಗ ಸುಳ್ಳು ಹೇಳುವುದು.
2. ವಾಗ್ದಾನ ಮಾಡಿ, ವಾಗ್ದಾನವನ್ನು ಮುರಿಯುವುದು.
3. ಯಾರಾದರೂ ವಿಶ್ವಸ್ಥ ನಿಧಿಯನ್ನು ರಕ್ಷಣೆಗಾಗಿ ಕೊಟ್ಟರೆ, ಅದರಲ್ಲಿ ವಿಶ್ವಾಸ ಘಾತುಕತನ ಮಾಡುವುದು (ಬುಖಾರಿ)

ಅಮಾನತ್(ವಿಶ್ವಸ್ಥ ನಿಧಿ)ನ ಸಂದಾಯ ಎಷ್ಟು ಅನಿವಾರ್ಯವೋ, ವಿಶ್ವಾಸ ಘಾತುಕತನವು ಅಷ್ಟೇ ಅಪ್ರಿಯ. ವಿಶ್ವಾಸಘಾತುಕನನ್ನು ವಂಚಿಸುವುದು ಕೂಡಾ ಪ್ರವಾದಿ ಮುಹಮ್ಮದ್(ಸ) ಇಷ್ಟಪಡುತ್ತಿರಲಿಲ್ಲ.

ಪ್ರವಾದಿ ಮುಹಮ್ಮದ್‌ರು(ಸ) ಹೀಗೆ ಹೇಳಿರುವರೆಂದು ಹ. ಅಬೂ ಹುರೈರ(ರ) ವರದಿ ಮಾಡುತ್ತಾರೆ.

"ಯಾರಾದರೂ ನಿಮ್ಮೊಡನೆ ಅಮಾನತನ್ನು ಕೊಟ್ಟರೆ, ಅಮಾನತನ್ನು ತೀರಿಸಿ ಯಾರಾದರೂ ನಿಮ್ಮ ಅಮಾನತನ್ನು ಕಬಳಿಸಿದರೆ, ನೀವು ಆತನೊಡನೆ ವಿಶ್ವಾಸಘಾತಕವನ್ನು ಮಾಡಬೇಡಿ." **(ತಿರ್ಮಿದಿ)**

ಇದರ ಕಾರಣ, ವಂಚನೆಯ ಬದಲಾಗಿ ವಂಚನೆಯು ಪ್ರಾರಂಭಗೊಂಡಾಗ, ಸಮಾಜದಲ್ಲಿ ವಂಚನೆ ಮತ್ತು ಅಪ್ರಮಾಣಿಕತೆಯು ರಾರಾಜಿಸ ತೊಡಗುತ್ತದೆ. ಇದು ಸಮಾಜದಲ್ಲಿ ಹಿಂಸೆಗಳಿಗೆ ಹೇತುವಾಗುತ್ತದೆ. ಕೆಲವು ಸೊತ್ತುಗಳಲ್ಲಿ ಹಲವರ ಪಾಲಿರುತ್ತದೆ. ಆದರೆ ಆ ಪಾಲನ್ನು ಹಂಚಿದಾಗ ಮಾತ್ರ, ಆ ಪಾಲುದಾರರು ಅವರ ಸೊತ್ತಿನ ಮಾಲಿಕ ರಾಗುತ್ತಾರೆ. ಉದಾಹರಣೆಗೆ, ಸಮರಾರ್ಜಿತ ಸೊತ್ತು ಕೇವಲ ಯೋಧರ (ಮುಜಾಹಿದ್) ಹಕ್ಕಾಗಿದ್ದರೂ, ಅದನ್ನು ಹಂಚುವ ಮೊದಲು ಅನುಮತಿ ಇಲ್ಲದೆ ಅದರಿಂದ ತೆಗೆಯ ಬಾರದು. ಯಾರಾದರೂ ಅನುಮತಿ ಇಲ್ಲದೇ ತೆಗೆದರೆ ಅದು ವಂಚನೆ ಆಗಿದೆ. ಇದರ ಬಗ್ಗೆ ಹದೀಸಿನಲ್ಲಿ ಹೀಗೆ ಹೇಳಲಾಗಿದೆ.

ಹ. ಅಬೂ ಹುರೈರಾ(ರ) ಹೇಳುತ್ತಾರೆ, ನಾವು ಪ್ರವಾದಿ ಮುಹಮ್ಮದ್‌ರೊಡನೆ(ಸ) ಖೈಬರ್ ಯುದ್ಧಕ್ಕೆ ಹೋದ ಸಮಯ, ಸಮರಾರ್ಜಿತ ಸೊತ್ತಿನಲ್ಲಿ ಚಿನ್ನಾಭರಣ ಮತ್ತು ಬೆಳ್ಳಿಯನ್ನು ಪಡೆಯಲಿಲ್ಲ. ಬದಲಾಗಿ, ವಸ್ತ್ರ, ಸಾಮಗ್ರಿ ಮತ್ತು ಇತರ ಸೊತ್ತನ್ನು (ಎಂದರೆ, ಜಾನುವಾರು, ಖರ್ಜೂರದ ಮರಗಳು ಮತ್ತು ಭೂಮಿ ಇತ್ಯಾದಿ) ಪಡೆದೆವು. ನಂತರ ಪ್ರವಾದಿ ಮುಹಮ್ಮದ್‌ರು(ಸ) ಅಲ್-ಖುಲಾ ಕಣಿವೆಯ ಕಡೆಗೆ ಹೊರಟರು. ಅಲ್ಲಿ ಮಿದ್‌ಅಮ್ ಎಂಬ ಗುಲಾಮನನ್ನು ಉಡುಗೊರೆಯ ರೂಪದಲ್ಲಿ ಪ್ರವಾದಿ ಮುಹಮ್ಮದ್‌ರಿಗೆ(ಸ) ಕೊಡಲಾಯಿತು. ಜನರು ಅಲ್-ಖುರಾ ಕಣಿವೆಯನ್ನು ತಲುಪಿದರು. ಮಿದ್‌ಅಮ್ ಪ್ರವಾದಿ ಮುಹಮ್ಮದ್‌ರ(ಸ) ಒಂಟೆಯ ಜೀನನ್ನು ಕೆಳಗಿಳಿಸುತ್ತಿದ್ದ ಸಮಯ, ಯಾರೋ ಅಪರಿಚಿತನ ಬಾಣಕ್ಕೆ ಬಲಿಯಾಗಿ ಸಾವನ್ನಪ್ಪಿದ. ಆಗ ಜನರು, ಈತ ಬಹಳ ಭಾಗ್ಯಶಾಲಿ ವ್ಯಕ್ತಿ. ಈತನಿಗೆ ಖಂಡಿತವಾಗಿಯೂ ಸ್ವರ್ಗ ಪ್ರಾಪ್ತಿಯಾಗುವುದು ಎಂದು ಹೇಳಿದರು. ಆಗ ಪ್ರವಾದಿ ಮುಹಮ್ಮದ್‌ರು(ಸ) 'ಖಂಡಿತವಾಗಿಯೂ ಇಲ್ಲ' ಎಂದು ಹೇಳಿದರು. ಯಾರ ಕೈಯಲ್ಲಿ ನನ್ನ ಪ್ರಾಣವಿದೆಯೊ ಆತನ ಆಣೆ, ಖೈಬರ್ ಯುದ್ಧದ ಸಮಯ ಈತ ಸಮರಾರ್ಜಿತ ಸೊತ್ತಿನಿಂದ ಒಂದು ಚಾದರವನ್ನು ತೆಗೆದಿದ್ದ. ಅದು ಬೆಂಕಿಯಾಗಿ ಅವನನ್ನು ಸುಡುತ್ತಿದೆ. ಇದನ್ನು ಕೇಳುತ್ತಿದ್ದ ಸಹಾಬಿಗಳ(ರ) ಪೈಕಿ ಒಬ್ಬರು, ಒಂದು ಅಥವಾ ಎರಡು ಚರ್ಮದ ಪಟ್ಟಿಯನ್ನು ತೆಗೆದರೆ ಎಂದು ಪ್ರವಾದಿ ಮುಹಮ್ಮದ್‌ರೊಡನೆ(ಸ) ಪ್ರಶ್ನಿಸಿದರು. ಚರ್ಮದ ಒಂದೆರಡು ತುಂಡು ಕೂಡ ಬೆಂಕಿಯದ್ದಾಗಿದೆ ಎಂದು ಪ್ರವಾದಿ ಮುಹಮ್ಮದ್‌ರು(ಸ) ಉತ್ತರಿಸಿದರು.

**(ಅಬೂದಾವೂದ್)**

ಅಬೂದಾವೂದ್‌ನ ಜಿಹಾದ್ ಅಧ್ಯಾಯದ ಒಂದು ಹದೀಸಿನಲ್ಲಿ ಈ ಬಗ್ಗೆ ಹೀಗೆ ಹೇಳಲಾಗಿದೆ. ಪ್ರವಾದಿ ಮುಹಮ್ಮದ್(ಸ) ಎಲ್ಲ ಸಮರಾರ್ಜಿತ ಸೊತ್ತುಗಳನ್ನು ಒಂದು ಕಡೆ ಶೇಖರಿಸುವಂತೆ ಘೋಷಿಸಲು ಹ. ಬಿಲಾಲ್‌ರಿಗೆ(ರ) ಆದೇಶಿಸುತ್ತಿದ್ದರು. ನಂತರ ಪ್ರವಾದಿ ಮುಹಮ್ಮದ್‌ರು(ಸ) ಅದರಿಂದ, ಬೈತುಲ್‌ಮಾಲಿನ 5ನೇ ಭಾಗವನ್ನು ತೆಗೆದು ಉಳಿದುದನ್ನು ಯೋಧರಲ್ಲಿ ಹಂಚುವುದು ರೂಢಿ ಆಗಿತ್ತು. ಒಮ್ಮೆ ಇದೇ ರೀತಿ ಹಂಚುವ ಕೆಲಸ ಮುಗಿದ ನಂತರ, ಒಬ್ಬ ವ್ಯಕ್ತಿ ಒಂದು ರೋಮದ ಕಡಿವಾಣವನ್ನು ತಂದು ಪ್ರವಾದಿ ಮುಹಮ್ಮದ್‌ರಿಗೆ(ಸ) ಕೊಟ್ಟರು. ಆಗ ಪ್ರವಾದಿ ಮುಹಮ್ಮದ್‌ರು(ಸ), 'ಬಿಲಾಲರು(ರ) ಮೂರು ಸಲ ಘೋಷಿಸಿದುದನ್ನು ನೀವು ಕೇಳಲಿಲ್ಲವೇ? ಎಂದು ಪ್ರಶ್ನಿಸಿದರು. ಆ ವ್ಯಕ್ತಿ ಒಂದು ನೆಪವನ್ನು ಹೇಳಿದ. ಆದರೆ ಪ್ರವಾದಿ ಮುಹಮ್ಮದರು(ಸ) ಆತನ ನೆಪ ಮತ್ತು ಕಡಿವಾಣವನ್ನು ಸ್ವೀಕರಿಸಲಿಲ್ಲ ಮತ್ತು 'ನೀನು ಈ ಕಡಿವಾಣವನ್ನು ಪುನರುತ್ಥಾನ ದಿನದಂದು ತೆಗೆದುಕೊಂಡು ಬಾ' ಎಂದು ಹೇಳಿದರು.

ಕೆಲವರು ನಿಷಿದ್ಧ ಮಾರ್ಗದಿಂದ ಸಂಪತ್ತನ್ನು ಗಳಿಸಿ, ತಮ್ಮ ಪಾಪ ವಿಮೋಚನೆಗಾಗಿ ಅದರ ಒಂದು ಭಾಗವನ್ನು ಅಲ್ಲಾಹನ ಮಾರ್ಗದಲ್ಲಿ ದಾನ ಮಾಡುತ್ತಾರೆ. ಇದು ಆತ್ಮ ವಂಚನೆ ಆಗಿದೆ. ನಿಷಿದ್ಧ ಮಾರ್ಗದಿಂದ ವಂಚಿಸಿ ಪಡೆದ ಸಂಪತ್ತು, ಪಾಪ ವಿಮೋಚನೆಗೆ ಹೇತು ಆಗುವುದು ಸಾಧ್ಯವಿಲ್ಲ.

ಅಬುಲ್ ಮಲೀಹ್ ತಮ್ಮ ತಂದೆಯ ಮೂಲಕ ವರದಿ ಮಾಡುತ್ತಾರೆ. ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು, "ವಂಚಿಸಿ ಪಡೆದ ಸಂಪತ್ತಿನ ದಾನವನ್ನು ಅಲ್ಲಾಹನು ಸ್ವೀಕರಿಸುವುದಿಲ್ಲ ಮತ್ತು ಶುಚಿತ್ವ ಇಲ್ಲದ ನಮಾಝನ್ನು ಕೂಡ ಸ್ವೀಕರಿಸುವುದಿಲ್ಲ.

(ಅಬೂದಾವೂದ್)

## ಕಳ್ಳತನ

ಕಳ್ಳತನವನ್ನು ದೊಡ್ಡ ಪಾಪಗಳಲ್ಲಿ ಸೇರಿಸಲಾಗಿದೆ. ಕಾರಣ, ಅದೊಂದು ನೀಚ ಮತ್ತು ನೋಯಿಸುವ ಕಾರ್ಯ. ಒಬ್ಬನು ಧರ್ಮಸಮ್ಮತ ಪರಿಶ್ರಮದಿಂದ ಪಡೆದ ವಸ್ತುವನ್ನು, ಇನ್ನೊಬ್ಬನು ನಿಷಿದ್ಧ ಮಾರ್ಗದಿಂದ ತನ್ನದಾಗಿಸಿಕೊಂಡು, ಆತನ ಲಾಭದಿಂದ ಆತನನ್ನು ವಂಚಿಸುತ್ತಾನೆ. ಆದುದರಿಂದ ಇದೊಂದು ದೊಡ್ಡ ಪಾಪ ಎಂದು ಪರಿಗಣಿಸಲಾಗಿದೆ ಮತ್ತು ಇದಕ್ಕೆ ಕಠಿಣ ಶಿಕ್ಷೆಯನ್ನು ವಿಧಿಸಲಾಗಿದೆ. ಅಂದರೆ ಸ್ತ್ರೀ, ಪುರುಷ ಎಂಬ ವ್ಯತ್ಯಾಸವನ್ನು ಇರಿಸದೆ ಕೈ ಕಡಿಯುವ ಶಿಕ್ಷೆಯನ್ನು ವಿಧಿಸಲಾಗಿದೆ.

وَالسَّارِقُ وَالسَّارِقَةُ فَاقْطَعُوٓا اَيْدِيَهُمَا جَزَآءً بِمَا كَسَبَا

"ಕಳ್ಳತನ ಮಾಡಿದವನ ಮತ್ತು ಕಳ್ಳತನ ಮಾಡಿದವಳ ಕೈಗಳನ್ನು ಕಡಿದು ಬಿಡಿರಿ. ಇದು ಅವರ ಗಳಿಕೆಯ ಫಲ." (ಪವಿತ್ರ ಕುರ್‌ಆನ್, 5:38)

ಸಹೀಹ್ ಬುಖಾರಿಯ ಒಂದು ಹದೀಸ್ ಉಬಾದಃ ಬಿನ್ ಸಾಮಿತ್(ರ) ಉಲ್ಲೇಖಿಸುತ್ತಾರೆ- ಪ್ರವಾದಿ ಮುಹಮ್ಮದ್‌ರು(ಸ) ಒಂದು ಗುಂಪಿನೊಂದಿಗೆ ಕರಾರು ಮಾಡುತ್ತಾ ಕೆಲವು ವಿಷಯಗಳಿಂದ ತಡೆದರು. ಅದರಲ್ಲಿ ಒಂದು ನೀವು ಕಳ್ಳತನ ಮಾಡಬಾರದು ಎಂದಾಗಿತ್ತು. ಸ್ತ್ರೀ ಪುರುಷರು ಇಬ್ಬರಲ್ಲಿ ಯಾರಾದರೂ ಕಳ್ಳತನ ಮಾಡಿದರೆ, ಅದರ ಶಿಕ್ಷೆ ಕೈ ಕಡಿಯುವುದು ಎಂದು ಈ ಕೆಳಗಿನ ಹದೀಸಿನಿಂದ ತಿಳಿದು ಬರುತ್ತದೆ.

ಹ. ಆಯಿಶಾರು(ರ) ಹೇಳುತ್ತಾರೆ. ಒಮ್ಮೆ ಕುರೈಶರು ಕಳ್ಳತನ ಮಾಡಿದ ಓರ್ವ ಮಖ್ಝೂಮ್ ಗೋತ್ರದ ಮಹಿಳೆಯ ಬಗ್ಗೆ ಚಿಂತಿತರಾಗಿದ್ದರು. ಆಕೆಯ ಕೈ ಕಡಿಯುವಂತೆ ಪ್ರವಾದಿ ಮುಹಮ್ಮದ್‌ರು(ಸ) ಆದೇಶಿಸಿದರು. ಯಾರಾದರೂ ಪ್ರವಾದಿ ಮುಹಮ್ಮದ್‌ರೊಡನೆ(ಸ) ಈ ಶಿಕ್ಷೆಯಿಂದ ಆಕೆಯನ್ನು ಪಾರು ಮಾಡಲು ಮಾತನಾಡುತ್ತಿದ್ದರೆ ಒಳ್ಳೆಯದಿತ್ತು ಎಂದು ಕುರೈಶರು ಬಯಸುತ್ತಿದ್ದರು. ಉಸಾಮ ಬಿನ್ ಝೈದ್(ರ) ಪ್ರವಾದಿ ಮುಹಮ್ಮದ್‌ರ(ಸ) ಆಪ್ತರಾಗಿದ್ದರು. ಆದುದರಿಂದ ಅವರು ಮಾತನಾಡಿದರೆ ಒಳ್ಳೆದಿತ್ತು ಎಂದು ಕೆಲವರ ಸಲಹೆ ಆಗಿತ್ತು. ಉಸಾಮ(ರ) ಪ್ರವಾದಿ ಮುಹಮ್ಮದ್‌ರಲ್ಲಿ(ಸ) ಈ ಬಗ್ಗೆ ಪ್ರಸ್ತಾಪಿಸಿದಾಗ, ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು. ಅಲ್ಲಾಹನ ಆಜ್ಞೆಯಲ್ಲಿ ಒಂದು ಆಜ್ಞೆಯನ್ನು ಮುರಿಯುವ ಶಿಫಾರಸು ಮಾಡುತ್ತಿದ್ದೀರಾ? ನಂತರ ಕೂತಲ್ಲಿಂದ ಎದ್ದು ನಿಂತು ಜನರನ್ನು ಅಭಿಸಂಬೋಧಿಸಿ ಹೇಳಿದರು, "ನಿಮಗಿಂತ ಹಿಂದಿನ ಜನಾಂಗದವರು ನಾಶ ಹೊಂದಲು ಕಾರಣ, ಅವರಲ್ಲಿರುವ ಗೌರವಾನ್ವಿತ ಮತ್ತು ಪ್ರತಿಷ್ಠಿತ ವ್ಯಕ್ತಿಗಳು ಕದ್ದರೆ ಅವರನ್ನು ಶಿಕ್ಷಿಸದೆ; ಬಿಟ್ಟು ಬಿಡಲಾಗುತ್ತಿತ್ತು ಬಡವ ಹಾಗೂ ದುರ್ಬಲ ವ್ಯಕ್ತಿಯಾದರೆ ಆತನನ್ನು ಶಿಕ್ಷಿಸಲಾಗುತ್ತಿತ್ತು. ಅಲ್ಲಾಹನ ಆಣೆ, ಒಂದು ವೇಳೆ ಮುಹಮ್ಮದ್‌ರ(ಸ) ಮಗಳು ಫಾತಿಮಾ(ರ) ಕದ್ದರೂ ನಾನು ಆಕೆಯ ಕೈ ಕಡಿದು ಬಿಡುವೆನು" (ಬುಖಾರಿ)

ಹ. ಆಯಿಶಾರು(ರ) ವರದಿ ಮಾಡುತ್ತಾರೆ.

ಒಮ್ಮೆ ಪ್ರವಾದಿ ಮುಹಮ್ಮದ್‌ರು(ಸ) (ಕಳ್ಳತನದ ಅಪರಾಧದಲ್ಲಿ) ಓರ್ವ ಮಹಿಳೆಯ ಕೈಯನ್ನು ಕಡಿದಿದ್ದರು. ಅದರ ನಂತರವೂ ಆಕೆ ಬರುತ್ತಿದ್ದಳು ಮತ್ತು ನಾನು ಆಕೆಯ ಅವಶ್ಯಕತೆಗಳ ಬಗ್ಗೆ ಪ್ರವಾದಿ ಮುಹಮ್ಮದ್‌ರೊಡನೆ(ಸ) ಹೇಳುತ್ತಿದ್ದೆ. ಆಕೆ ಪಶ್ಚಾತ್ತಾಪ ಪಟ್ಟಿದ್ದಳು, ಉತ್ತಮ ರೀತಿಯಲ್ಲಿ ಪಶ್ಚಾತ್ತಾಪ ಪಟ್ಟಿದ್ದಳು. (ಬುಖಾರಿ)

## ಲಂಚ ಪಡೆಯುವುದು ಮತ್ತು ಕೊಡುವುದು

ಲಂಚ ಎಂದರೆ ತನ್ನ ಅನೈತಿಕ ಬೇಡಿಕೆಗಳನ್ನು ಪೂರೈಸಲು, ಅಧಿಕಾರಿಗಳಿಗೆ ಹಣ ಕೊಟ್ಟು ತಮ್ಮ ಹಿತಕ್ಕಾಗಿ ಬಳಸುವುದಾಗಿದೆ. ಲಂಚ ರಾರಾಜಿಸುತ್ತಿರುವಂತಹ ಸಮಾಜದಲ್ಲಿ ಹಕ್ಕುದಾರರ ಹಕ್ಕನ್ನೂ ಕಸಿದು, ಹಕ್ಕುದಾರರಿಲ್ಲದವರಿಗೆ ಕೊಡಲಾಗುತ್ತದೆ. ಲಂಚ ಕೊಡುವವ,

ಲಂಚ ಕೊಟ್ಟು, ಅನುಚಿತ ಕೆಲಸ ಕಾರ್ಯಗಳನ್ನು ಮಾಡಿಸುತ್ತಾನೆ ಮತ್ತು ಲಂಚ ಕೊಡ ಬಯಸದವನು, ಅಥವಾ ಲಂಚ ಕೊಡುವ ಯೋಗ್ಯತೆ ಇಲ್ಲದವರ ಹಕ್ಕು ಆತನಿಗೆ ಸಿಗುವುದಿಲ್ಲ. ಇದರ ಕಾರಣ, ಸಮಾಜವು ಕೆಟ್ಟು, ದುಃಖಕರ ವಾತಾವರಣ ಸೃಷ್ಟಿಯಾಗುತ್ತದೆ. ಲಂಚದ ಬಗ್ಗೆ ಇರುವ ಆದೇಶಗಳನ್ನು ನೋಡಿದರೆ ಲಂಚ ಪಡೆಯುವುದು ಮಾತ್ರವಲ್ಲ ಕೊಡುವುದು ಕೂಡ ಪಾಪ ಕಾರ್ಯ ಆಗಿದೆ ಎಂದು ತಿಳಿಯಬಹುದು. ಸೂರಃ ಅಲ್ ಬಕರದ 188ನೇ ಸೂಕ್ತದಲ್ಲಿ ಹೀಗೆ ಹೇಳಲಾಗಿದೆ:

وَلَا تَأْكُلُوٓا أَمْوَٰلَكُم بَيْنَكُم بِٱلْبَٰطِلِ وَتُدْلُوا بِهَآ إِلَى ٱلْحُكَّامِ لِتَأْكُلُوا فَرِيقًا

مِّنْ أَمْوَٰلِ ٱلنَّاسِ بِٱلْإِثْمِ وَأَنتُمْ تَعْلَمُونَ

**"ನೀವು ನಿಮ್ಮ ಸಂಪತ್ತನ್ನು ಪರಸ್ಪರ ಅನುಚಿತ ರೀತಿಯಿಂದ ಕಬಳಿಸಬಾರದು ಮತ್ತು ನಿಮಗೆ ಇತರರ ಸಂಪತ್ತಿನ ಒಂದಂಶವನ್ನು ಉದ್ದೇಶಪೂರ್ವಕವಾಗಿ ಅಕ್ರಮ ರೂಪದಿಂದ ಕಬಳಿಸುವ ಸಂದರ್ಭ ಸಿಗುವಂತೆ ಅವುಗಳನ್ನು ಅಧಿಕಾರಿಗಳ ಮುಂದೆ ಸಮರ್ಪಿಸಬಾರದು."**

ಎಂದರೆ, ಅಧಿಕಾರಿಗಳಿಗೆ ಲಂಚ ಕೊಟ್ಟು ನಿಷಿದ್ಧ ಲಾಭಗಳನ್ನು ಪಡೆಯುವ ಪ್ರಯತ್ನ ಮಾಡಬೇಡಿ ಮತ್ತು ಆ ಸಂಪತ್ತು ಅಥವಾ ವಸ್ತು ನಿಮಗೆ ಸೇರಿದ್ದಲ್ಲ ಎಂದು ತಿಳಿದು, ಸಾಕ್ಷ್ಯ ಇಲ್ಲದ ಕಾರಣ, ನ್ಯಾಯಾಲಯದಲ್ಲಿ ಸುಳ್ಳು ದಾವೆ ಹೂಡಿ ನಿಮ್ಮದನ್ನಾಗಿ ಮಾಡಬೇಡಿ ಎಂಬ ಎರಡು ಅರ್ಥಗಳು ಈ ಸೂಕ್ತದಿಂದ ತಿಳಿಯಬಹುದು. ನ್ಯಾಯಾಧೀಶರು ಮೊಕದ್ದಮೆಯ ವರದಿಯನ್ನು ಆಲಿಸಿ, ಇನ್ನೊಬ್ಬರ ಸೊತ್ತನ್ನು ನಿಮಗೆ ವಹಿಸಬಹುದು. ಆದರೆ, ನ್ಯಾಯಾಧೀಶರ ಈ ತೀರ್ಪು ವಂಚಿಸಿ ಮಾಡಿದ ಸುಳ್ಳು ವರದಿಯ ಕಾರಣ ದಿಂದಾಗಿರುತ್ತದೆ. ಆದುದರಿಂದ ನ್ಯಾಯಾಧೀಶ ನಿಮ್ಮ ಪರವಾಗಿ ತೀರ್ಪು ಕೊಟ್ಟು, ನೀವು ಆ ಸೊತ್ತಿನ ಮಾಲೀಕರಾದರೂ, ನಿಜವಾಗಿ ನೀವು ಅದರ ಧರ್ಮಸಮ್ಮತ ಮಾಲೀಕರಾಗು ವುದಿಲ್ಲ. ಆ ವಸ್ತು ನಿಮಗೆ ನಿಷಿದ್ಧವಾಗಿರುವುದು.

(ತಫ್ಹೀಮುಲ್ ಕುರ್‌ಆನ್)

ಈ ಬಗ್ಗೆ ಪ್ರವಾದಿ ಮುಹಮ್ಮದ್‌ರ(ಸ) ಈ ಕೆಳಗಿನ ಹದೀಸಿನಿಂದಲೂ ತಿಳಿಯ ಬಹುದು. ಹ.ಉಮ್ಮು ಸಲಮ ಉಲ್ಲೇಖಿಸುತ್ತಾರೆ. ಪ್ರವಾದಿ ಮುಹಮ್ಮದರು(ಸ) ಹೇಳಿದರು, ನಾನು ಕೂಡ ಓರ್ವ ಮನುಷ್ಯನಾಗಿದ್ದೇನೆ. ನೀವು ನಿಮ್ಮ ಮೊಕದ್ದಮೆಗಳನ್ನು ನನ್ನ ಬಳಿಗೆ ತರುತ್ತೀರಿ. ವಿಷಯವನ್ನು ಮಂಡಿಸುವಲ್ಲಿ, ನಿಮ್ಮಲ್ಲಿ ಒಬ್ಬ ಇನ್ನೊಬ್ಬನಿಗಿಂತ ಉತ್ತಮ ವಾಕ್ಚತುರನಾಗಿರಬಹುದು ಮತ್ತು ನಾನು ನಿಮ್ಮ ವರದಿಯನ್ನು ಕೇಳಿ(ಅದನ್ನು ಸತ್ಯ ಎಂದು ಪರಿಗಣಿಸಿ) ಅದರ ಪ್ರಕಾರ ಅವನ ಪರವಾಗಿ ತೀರ್ಪು ಮಾಡಬಹುದು. ಆದರೆ ಯಾರ ಪರವಾಗಿ ನಾನು ತೀರ್ಪು ಮಾಡಿ ಆ ವಸ್ತುವನ್ನು ಅವನಿಗೆ ಕೊಟ್ಟಿರುವೆನೋ, (ನಿಜವಾಗಿ) ಅದು ಆತನ ಸಹೋದರನ ಹಕ್ಕಾಗಿದ್ದರೆ, ಆತ ಅದನ್ನು ಅವನಿಗೆ ಹಿಂದುರುಗಿಸಲಿ. ಏಕೆಂದರೆ

ನಾನು ಕೊಟ್ಟ ವಸ್ತು ನರಕದ ತುಂಡು ಆಗಿರುತ್ತದೆ. (ಬುಖಾರಿ)

ಅರ್ಥಾತ್ ಆತ ಸುಳ್ಳು ದಾವೆ ಹೂಡಿ, ನ್ಯಾಯವನ್ನು ತನ್ನ ಪರವಾಗಿ ತಿರುಚಿಕೊಂಡರೂ ಅಲ್ಲಾಹನ ಮುಂದೆ ಆತ ಅಪಹಾರಕನಾಗಿರುವನು. ಅದೇ ಪ್ರಕಾರ ಲಂಚ ಕೊಟ್ಟು, ಇನ್ನೊಬ್ಬರ ಹಕ್ಕಿನ ಮಾಲೀಕನಾಗುವುದು, ಅಥವಾ ಲಂಚ ಪಡೆದು ಒಬ್ಬರ ಹಕ್ಕನ್ನು ಕಸಿದು, ಇನ್ನೊಬ್ಬರಿಗೆ ಕೊಡುವುದು ಬಹುದೊಡ್ಡ ಪಾಪ ಕಾರ್ಯವಾಗಿದೆ. ಇದರಿಂದ ಸಮಾಜದಲ್ಲಿ ಕಳವಳಕಾರಿ ಮತ್ತು ವಿವಶತೆಯ ವಾತಾವರಣ ಸೃಷ್ಟಿ ಆಗುವುದು.

ಹ. ಅಬ್ದುಲ್ಲಾ ಬಿನ್ ಉಮರ್(ರ) ವರದಿ ಮಾಡುತ್ತಾರೆ, "ಲಂಚ ಕೊಡುವವನ ಮತ್ತು ಲಂಚ ಪಡೆಯುವವನ (ಇಬ್ಬರ) ಮೇಲೆ ಪ್ರವಾದಿ ಮುಹಮ್ಮದ್‌ರು(ಸ) ಶಾಪ ಹಾಕಿರುವರು." (ತಿರ್ಮಿದಿ)

## ಜೂಜಾಟ

ಜೂಜಾಟದಿಂದ ಸಿಗುವ ಹಣ ಪರಿಶ್ರಮದ ಹಣವಲ್ಲ. ಬದಲಾಗಿ-ಅನಿರೀಕ್ಷಿತವಾಗಿ ಸಿಗುವ ಹಣ. ಜೂಜಾಟದಲ್ಲಿ ಸಿಗುವ ಹಣ, ಆತನ ಹಕ್ಕಿನ ಹಣವಾಗಿರದೆ, ಅನಿರೀಕ್ಷಿತವಾಗಿ ಗೆದ್ದು ಸಿಗುವ ಹಣ. ಈ ರೀತಿ ಆತ ಇನ್ನೊಬ್ಬರ ಹಣದ ಮಾಲೀಕನಾಗುತ್ತಾನೆ. ಇದು ಅನ್ಯಾಯವಾಗಿರುವ ಕಾರಣ, ಜೂಜಾಟವನ್ನು ನಿಷಿದ್ಧ ಎಂದು ಸಾರಲಾಗಿದೆ.

ದುರಾಸೆ ಇರುವವರು ರಾತ್ರಿ ಬೆಳಗಾಗುವುದರೊಳಗೆ ಶ್ರೀಮಂತರಾಗಬಯಸುವ ಕನಸು ಕಾಣುತ್ತ ಜೂಜಾಡುವುದನ್ನು ಪ್ರಾರಂಭಿಸುತ್ತಾರೆ. ನಂತರ ಮದ್ಯಪಾನದಂತೆ ಇದರ ಚಟವೂ ಆದಾಗ ಪದೇ ಪದೇ ಪರಾಜಯಗೊಂಡರೂ ಜೂಜಾಡುವುದನ್ನು ನಿಲ್ಲಿಸುವುದಿಲ್ಲ. ಸೋತರೆ ನಾಶ ಹೊಂದುತ್ತಾರೆ ಮತ್ತು ಗೆದ್ದರೆ ಇನ್ನೊಬ್ಬರ ಸೊತ್ತಿನ ಮಾಲೀಕರಾಗುತ್ತಾರೆ. ಇದು ಗೆಲುವಲ್ಲ. ನೈಜ ನಾಶವಾಗಿದೆ. ಸೂರಃ ಅಲ್ ಬಕರದ 219ನೆಯ ಸೂಕ್ತದಲ್ಲಿ ಹೀಗಿದೆ.

يَسْئَلُوْنَكَ عَنِ الْخَمْرِ وَالْمَيْسِرِ قُلْ فِيْهِمَآ اِثْمٌ كَبِيْرٌ وَّ مَنَافِعُ لِلنَّاسِ
وَ اِثْمُهُمَآ اَكْبَرُ مِنْ نَّفْعِهِمَا

"ಮದ್ಯಪಾನ ಮತ್ತು ಜೂಜಾಟದ ಬಗ್ಗೆ ಏನು ಆದೇಶವಿದೆಯೆಂದು ಕೇಳುತ್ತಾರೆ. ಹೇಳಿರಿ! ಅವೆರಡರಲ್ಲೂ ಮಹತ್ತರವಾದ ಕೇಡಿದೆ. ಅವುಗಳಲ್ಲಿ ಜನರಿಗೆ ಕೆಲವು ಪ್ರಯೋಜನಗಳು ಇದ್ದರೂ ಅವುಗಳಿಂದಾಗುವ ಹಾನಿಯು ಪ್ರಯೋಜನಗಳಿಗಿಂತ ಬಹಳಷ್ಟು ಹೆಚ್ಚು."

ಅರೇಬಿಯಾದಲ್ಲಿ ಜೂಜಾಟ ಸಾಮಾನ್ಯವಾಗಿತ್ತು. ಇಲ್ಲಿ ಮೊದಲ ಬಾರಿ ಜೂಜಾಟವನ್ನು ಅಪ್ರಿಯ ಕ್ರಿಯೆ ಎಂದು ಹೇಳಲಾಗಿದೆ. ಕ್ರಮೇಣ ಎರಡನ್ನೂ ನಿಷೇಧಿಸಲಾಯಿತು. ಸೂರಃ ಅಲ್ ಮಾಇದಃದ 90-91ನೇ ಸೂಕ್ತದಲ್ಲಿ ಈ ಎರಡನ್ನೂ ನಿಷೇಧಿಸಲಾಗಿರುವ ಬಗ್ಗೆ ವಿವರಣೆ ನೀಡಲಾಗಿದೆ.

"ಓ ಸತ್ಯವಿಶ್ವಾಸಿಗಳೇ, ಮದ್ಯ, ಜೂಜು, 'ಬಲಿ ಪೀಠಗಳು' ಮತ್ತು 'ದಾಳ ಹಾಕುವುದು'

ಇವೆಲ್ಲ ಹೊಲಸು ಪೈಶಾಚಿಕ ಕೃತ್ಯಗಳಾಗಿವೆ. ಅವುಗಳನ್ನು ವರ್ಜಿಸಿರಿ, ನಿಮಗೆ ಯಶಸ್ಸು ಲಭಿಸುವುದೆಂದು ನಿರೀಕ್ಷಿಸಬಹುದು."

ಮದ್ಯಪಾನ ಮತ್ತು ಜೂಜಾಟದಿಂದ ಸಮಾಜದ ಮೇಲೆ ಸಂಭವಿಸುವ ಇತರೆಲ್ಲ ಹಾನಿಗಿಂತ ಅತಿ ದೊಡ್ಡ ಎರಡು ಹಾನಿಯೆಂದರೆ ಮನುಷ್ಯ ತನ್ನ ಸೃಷ್ಟಿಕರ್ತನಾದ ಅಲ್ಲಾಹನಿಂದ ದೂರ ಸರಿಯುತ್ತಾನೆ ಮತ್ತು ಅಲ್ಲಾಹನನ್ನು ಮರೆಯುತ್ತಾನೆ. ಇದರ ಕಾರಣ ಪರಸ್ಪರ ವೈರತ್ವ, ಅಸೂಯೆ ಮತ್ತು ದ್ವೇಷ ಹುಟ್ಟಿಕೊಳ್ಳುತ್ತದೆ. ಸೂರಃ ಅಲ್ ಮಾಇದಃ 91 ಸೂಕ್ತದಲ್ಲಿ ಹೇಳಲಾಗಿದೆ.

"ಶೈತಾನನು ಮದ್ಯ ಮತ್ತು ಜೂಜಿನ ಮೂಲಕ ನಿಮ್ಮೊಳಗೆ ವೈರತ್ವ ಮತ್ತು ದ್ವೇಷವನ್ನುಂಟು ಮಾಡಲಿಕ್ಕೂ ನಿಮ್ಮನ್ನು ಅಲ್ಲಾಹನ ಸ್ಮರಣೆಯಿಂದಲೂ ನಮಾಝಿನಿಂದಲೂ ತಡೆಯಲಿಕ್ಕೂ ಇಚ್ಛಿಸುತ್ತಾನೆ."

## ಬಡ್ಡಿ ತಿನ್ನುವುದು

ಸಮಾಜದಲ್ಲಿ ಬಡ್ಡಿ ರಾರಾಜಿಸಲು ಕಾರಣ. ದುರಾಸೆ, ಲೋಭ ಮತ್ತು ಹಿಂಸೆ ಇತ್ಯಾದಿಗಳಾಗಿವೆ. ದುರಾಸೆಯ ಕಾರಣ, ಬಡ್ಡಿಕೋರ, ಎಲ್ಲ ಸಂಪತ್ತಿನ ಮಾಲಿಕ ಕೇವಲ ನಾನೊಬ್ಬನೇ ಆಗಬೇಕೆಂದು ಬಯಸುತ್ತಾನೆ. ಲೋಭಿ ಬಡ ಸಾಲಗಾರನಿಗೆ ಯಾವುದೇ ರೀತಿಯಲ್ಲಿ ರಿಯಾಯಿತಿ ಮಾಡ ಬಯಸುವುದಿಲ್ಲ ಮತ್ತು ದಾನದ ಮುಖಾಂತರ ತನ್ನ ಸಂಪತ್ತು ವ್ಯರ್ಥಗೊಳಿಸ ಬಯಸುವುದಿಲ್ಲ. ಆತ ಬಡ್ಡಿ, ಚಕ್ರಬಡ್ಡಿಗಳ ಮುಖಾಂತರ ಜನರನ್ನು ಹಿಂಸಿಸಿ, ಅವರ ಪರಿಶ್ರಮದ ಪ್ರತಿಫಲದಿಂದ ಅವರನ್ನು ವಂಚಿಸುತ್ತಾನೆ.

ಇಸ್ಲಾಮಿನಲ್ಲಿ ಬಡ್ಡಿಯನ್ನು ಕಟುವಾಗಿ ನಿಷೇಧಿಸಲಾಗಿದೆ. ಸೂರಃ ಅಲ್ ಬಕರ 275ನೇ ಸೂಕ್ತದಲ್ಲಿ ಹೇಳಲಾಗಿದೆ.

اَلَّذِيْنَ يَاْكُلُوْنَ الرِّبٰوا لَا يَقُوْمُوْنَ اِلَّا كَمَا يَقُوْمُ الَّذِيْ يَتَخَبَّطُهُ الشَّيْطٰنُ مِنَ الْمَسِّ

"ಆದರೆ ಬಡ್ಡಿ ತಿನ್ನುವವರ ಅವಸ್ಥೆಯು ಶೈತಾನನ ಸೋಂಕಿನಿಂದ ಹುಚ್ಚನಾದವ ನಂತಿದೆ."

ಬಡ್ಡಿಕೋರನನ್ನು ಕುರ್‌ಆನ್ ಬುದ್ಧಿಭ್ರಂಶನೆಂದು ಕರೆಯುತ್ತದೆ. ಎಂದರೆ ಯಾವ ರೀತಿ ಹುಚ್ಚ ಬುದ್ಧಿಭ್ರಂಶನಾಗಿ ವಿಚಿತ್ರ ಚಟುವಟಿಕೆಗಳನ್ನು ಮಾಡುತ್ತಾನೆಯೋ, ಅದೇ ರೀತಿ ಬಡ್ಡಿಕೋರನು ಕೂಡ ಹಣದ ಹಿಂದೆ ಬಿದ್ದು ಹುಚ್ಚನಾಗುತ್ತಾನೆ ಮತ್ತು ತನ್ನ ಅತ್ಯಧಿಕ ಸ್ವಾರ್ಥದ ಕಾರಣ ಮಾನವೀಯತೆ, ಭ್ರಾತೃತ್ವ ಮತ್ತು ಸಹಾನುಭೂತಿಗಳ ಮೂಲವನ್ನೇ ಕಿತ್ತೆಸೆಯುತ್ತಾನೆ. ಆತನ ಕಾರಣ ಸಾಮೂಹಿಕ ಅಭಿವೃದ್ಧಿಯ ಮೇಲೆ ಕೆಟ್ಟ ಪರಿಣಾಮ

ಉಂಟಾಗುತ್ತದೆ ಮತ್ತು ಅನೇಕ ಜನರ ದುಃಸ್ಥಿತಿಯಿಂದ ಆತ ತನ್ನ ಭಾಗ್ಯವನ್ನು ರೂಪಿಸುತ್ತಾನೆ. ಇದು ಲೌಕಿಕ ಹುಚ್ಚುತನವಾಗಿದೆ. ಪುನರುತ್ಥಾನದ ದಿನದಂದು ಮನುಷ್ಯನನ್ನು, ಆತ ಮರಣ ಹೊಂದಿದ ರೀತಿಯಲ್ಲೇ ಎಬ್ಬಿಸಲಾಗುವುದರಿಂದ, ಬಡ್ಡಿಕೋರನನ್ನು, ಪುನರುತ್ಥಾನದ ದಿನದಂದು ಮತಿಭ್ರಾಂತ ಹುಚ್ಚನಂತೆ ಎಬ್ಬಿಸಲಾಗುವುದು.

(ತಫ್ಹೀಮುಲ್ ಕುರ್‌ಆನ್)

ಸೂರಃ ಅಲ್ ಬಕರದ 276ನೆ ಸೂಕ್ತದಲ್ಲಿ ಹೇಳಲಾಗಿದೆ:

يَمْحَقُ اللّٰهُ الرِّبٰوا وَ يُرْبِى الصَّدَقٰتِ

**"ಅಲ್ಲಾಹನು ಬಡ್ಡಿಯ ವ್ಯವಹಾರವನ್ನು ಅಳಿಸಿಬಿಡುತ್ತಾನೆ ಮತ್ತು ದಾನಧರ್ಮಗಳನ್ನು ವೃದ್ಧಿಸುತ್ತಾನೆ."**

ಜನರಿಗೆ ಬಡ್ಡಿಕೋರ ಶ್ರೀಮಂತನಾಗುವಂತೆ ಮತ್ತು ಝಕಾತ್ ಪಾವತಿಸುವವ ಬಡವನಾದಂತೆ ಕಂಡು ಬರುತ್ತದೆ. ಆದರೆ ಬಡ್ಡಿಯ ಕಾರಣ ಸಂಪತ್ತು ಕುಗ್ಗುತ್ತದೆ ಮತ್ತು ಝಕಾತ್ ಪಾವತಿಸುವುದರಿಂದ ಮತ್ತು ದಾನ ಮಾಡುವುದರಿಂದ ಸಂಪತ್ತು ವೃದ್ಧಿಸುತ್ತದೆ ಎಂದು ಅಲ್ಲಾಹು ಹೇಳುತ್ತಾನೆ. ಎಂದರೆ ವಾಸ್ತವವಾಗಿ, ಇಲ್ಲಿ ವೃದ್ಧಿಸುವುದು ಸಂಪತ್ತು ಅಲ್ಲ, ಬದಲಾಗಿ ಸಂಪತ್ತಿನ ಸುಖ ಸಮೃದ್ಧಿ ಎಂದಾಗಿದೆ. ಬಡ್ಡಿಯಿಂದ ಸಂಪತ್ತು ವೃದ್ಧಿಸುತ್ತಿರುವಂತೆ ಕಂಡು ಬಂದರೂ ಅದರ ಸುಖ ಸಮೃದ್ಧಿ ಕುಗ್ಗುತ್ತದೆ. ಝಕಾತ್ ಪಾವತಿಸುವುದರಿಂದ ಮತ್ತು ದಾನ ಮಾಡುವುದರಿಂದ ಸಂಪತ್ತು ಕುಗ್ಗುವಂತೆ ಕಂಡು ಬಂದರೂ, ಅದರಿಂದಾಗಿ ಸುಖ ಸಮೃದ್ಧಿ ವೃದ್ಧಿಸುತ್ತದೆ. ಬಡ್ಡಿಯ ಕಾರಣ ಸಂಪತ್ತಿನ ಕುಗ್ಗುವಿಕೆಯ ಬಗ್ಗೆ ಪ್ರವಾದಿ ಮುಹಮ್ಮದ್‌ರ(ಸ) ಈ ಕೆಳಗಿನ ಹದೀಸಿನಿಂದ ತಿಳಿಯಬಹುದು.

ಹ. ಇಬ್ನು ಮಸ್‌ಊದ್(ರ) ವರದಿ ಮಾಡುತ್ತಾರೆ. ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು, ಬಡ್ಡಿಕೋರ, ಬಡ್ಡಿಯ ಕಾರಣ ಶ್ರೀಮಂತನಾದರು, ಅದರ ಪರಿಣಾಮ ಸಂಪತ್ತಿನ ಕುಗ್ಗುವಿಕೆ ಆಗಿದೆ. (ಇಬ್ನುಮಾಜಃ)

ಸಂಪತ್ತು ಕುಗ್ಗುವ ಅನೇಕ ರೂಪಗಳಿವೆ. ಮೊದಲನೆಯದಾಗಿ ಸಂಪತ್ತು ವೃದ್ಧಿಸುವಂತೆ ಕಂಡು ಬಂದರೂ ಅದರ ಪರಿಣಾಮ ಮಾತ್ರ ಸೊನ್ನೆ. ಉದಾಹರಣೆಗೆ ನಿಷಿದ್ಧ ಸಂಪಾದನೆಯಿಂದ ಒಂದು ಮಗುವಿನ ಶಿಕ್ಷಣಕ್ಕೆ ಹಣ ಖರ್ಚು ಆಗುತ್ತದೆ ಎಂದಿಟ್ಟುಕೊಳ್ಳಿ. ಆ ವರ್ಷದ ಆ ಮಗು ಅನುತ್ತೀರ್ಣವಾದರೆ ಆ ವರ್ಷ ಕಟ್ಟಿದ ಫೀಸು, ಪುಸ್ತಕ ಮತ್ತು ವಾಹನ ಇತ್ಯಾದಿಗಳ ಖರ್ಚು ಮತ್ತು ಕಲಿಕಾ ಅವಧಿಯಲ್ಲಿ ಅಗತ್ಯವಿರುವ ವಿವಿಧ ರೀತಿಯ ಖರ್ಚು ಎಲ್ಲವೂ ವ್ಯರ್ಥ. ಅದೇ ಪ್ರಕಾರ ಸಂಪತ್ತು ಕುಗ್ಗುವ ಇನ್ನೊಂದು ದಾರಿ, ಅಯೋಗ್ಯ ಮಕ್ಕಳು, ಯೋಗ್ಯ ಮಕ್ಕಳಾಗಿ, ದುಡಿದು ಸಂಪಾದಿಸಿ ಮನೆಗೆ ತರಬೇಕಾಗಿದ್ದ ಅಪಾರ ಸಂಪತ್ತು

ಮನೆಗೆ ಬರುವುದಿಲ್ಲ. ಇದರರ್ಥ ಸಂಪತ್ತು ಕುಗ್ಗುತ್ತಿದೆ ಎಂದಾಗಿದೆ. ಅದೇ ರೀತಿ ಬಡ್ಡಿಯಿಂದ ಸಂಪಾದಿಸಿದ ಹಣ, ಮೊಕದ್ದಮೆ, ರೋಗರುಜಿನಗಳು, ನಾನಾ ರೀತಿಯ ಗಂಡಾಂತರ ಮತ್ತು ಭೋಗ ಲಾಲಸೆಗಳಲ್ಲಿ ವ್ಯಯವಾಗುತ್ತದೆ. ಬಡ್ಡಿಯ ಸಂಪಾದನೆ ಯಿಂದ ಖರೀದಿಸಿರುವ ಭೂಮಿಯ ಫಸಲು ನಾಶಗೊಳ್ಳುತ್ತದೆ, ಚಿನ್ನ ಮತ್ತು ವಜ್ರಾಭರಣ ಹಾಗೂ ಇತರ ಬೆಲೆ ಬಾಳುವ ವಸ್ತುಗಳು ಕದ್ದು ಹೋಗುತ್ತದೆ ಮತ್ತು ಕೆಲವೊಮ್ಮೆ ಸಂಪತ್ತು ಕುಗ್ಗುತ್ತಿರುವುದು ಕಂಡು ಬರುತ್ತದೆ.

ಬಡ್ಡಿಯನ್ನು ಎಷ್ಟು ಕಟುವಾಗಿ ನಿಷೇಧಿಸಲಾಗಿದೆ ಎಂದು ಈ ಕೆಳಗಿನ ಸೂಕ್ತದಿಂದ ಅರಿಯಬಹುದು.

**"ಓ ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡಿರಿ. ನೀವು ನಿಜಕ್ಕೂ ವಿಶ್ವಾಸಿಗಳಾಗಿರುವಿರಾದರೆ, ಜನರಿಂದ ನಿಮಗೆ ಬರತಕ್ಕ ಬಡ್ಡಿಯನ್ನು ಬಿಟ್ಟುಬಿಡಿರಿ. ನೀವು ಹಾಗೆ ಮಾಡದಿದ್ದರೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಕಡೆಯಿಂದ ನಿಮ್ಮ ವಿರುದ್ಧ ಯುದ್ಧ ಘೋಷಣೆಯಿದೆಯೆಂದು ನಿಮಗೆ ತಿಳಿದಿರಲಿ."**

**(ಪವಿತ್ರ ಕುರ್‌ಆನ್, 2:278-279)**

ಲಂಚದಂತೆ, ಬಡ್ಡಿಯನ್ನು ಕೂಡ, ಪಡೆಯುವುದು ಮತ್ತು ಕೊಡುವುದು, ಅದಕ್ಕಾಗಿ ದಸ್ತಾವೇಜುಗಳನ್ನು ಬರೆಯುವುದು ಅಥವಾ ಸಾಕ್ಷ್ಯ ವಹಿಸುವುದನ್ನೂ ನಿಷೇಧಿಸಲಾಗಿದೆ.

ಹ. ಇಬ್ನು ಮಸ್‌ಊದ್(ರ) ವರದಿ ಮಾಡುತ್ತಾರೆ, ಪ್ರವಾದಿ ಮುಹಮ್ಮದ್‌ರು(ಸ) ಬಡ್ಡಿಕೋರನ ಮೇಲೆ, ಬಡ್ಡಿಕೊಡುವವನ ಮೇಲೆ, ಅದರ ಸಾಕ್ಷ್ಯ ವಹಿಸುವವರ ಮೇಲೆ ಮತ್ತು ಅದರ ದಸ್ತಾವೇಜು ಬರೆಯುವವನ ಮೇಲೆ ಶಾಪ ಹಾಕಿದ್ದಾರೆ. (ತಿರ್ಮಿದಿ)

ಬಡ್ಡಿಕೋರ ಮರಣೋತ್ತರ ಜೀವನದಲ್ಲಿ ಅನುಭವಿಸುವ ಶಿಕ್ಷೆಯ ಬಗ್ಗೆ ಒಂದು ಹದೀಸ್ ಹೀಗಿದೆ.

ಹ. ಸಮ್ರ ಬಿನ್ ಜುಂದುಬ್(ರ) ಉಲ್ಲೇಖಿಸುತ್ತಾರೆ. ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು. ರಾತ್ರಿ, ಇಬ್ಬರು ನನ್ನ ಹತ್ತಿರ ಬಂದು, ನನ್ನನ್ನು ಭೂಮುಖದಿಂದ ಆಕಾಶದ ಕಡೆ ಕೊಂಡು ಹೋದರು. ಹೋಗುತ್ತ ನಾವೊಂದು ರಕ್ತದ ಕಾಲುವೆಯನ್ನು ಮುಟ್ಟಿದೆವು. ಕಾಲುವೆಯ ನಡುವಿನಲ್ಲಿ ಒಬ್ಬ ವ್ಯಕ್ತಿ ನಿಂತಿದ್ದ. (ಕಾಲುವೆಯ ದಂಡೆಯಲ್ಲಿ) ಕಲ್ಲುಗಳ ಎದುರು ಇನ್ನೊಬ್ಬ ವ್ಯಕ್ತಿ ನಿಂತಿದ್ದ. ಕಾಲುವೆಯ ಮಧ್ಯದಲ್ಲಿದ್ದ ವ್ಯಕ್ತಿ ಮುಂದೆ ಬಂದು (ಕಾಲುವೆಯಿಂದ) ಹೊರಬರಲು ಪ್ರಯತ್ನಿಸಿದಾಗ (ದಂಡೆಯಲ್ಲಿ ನಿಂತ ವ್ಯಕ್ತಿ) ಕಲ್ಲಿನಿಂದ ಆತನ ಮುಖದ ಮೇಲೆ ಹೊಡೆದ ಮತ್ತು ಆತನನ್ನು, ಆತ ಮೊದಲು ಇದ್ದ ಸ್ಥಳಕ್ಕೆ ಅಟ್ಟಿದ. ಆತ ಪುನಃ (ದಂಡೆಯ ಹತ್ತಿರ ಬಂದು) ಕಾಲುವೆಯಿಂದ ಹೊರ ಬರಲು ಪ್ರಯತ್ನಿಸಿದಾಗ (ದಂಡೆಯಲ್ಲಿ ನಿಂತ ವ್ಯಕ್ತಿ) ಆತನ ಮುಖದ ಮೇಲೆ ಕಲ್ಲೆಸೆದು, ಆತನನ್ನು, ಆತ ಹಿಂದೆ ಇದ್ದ ಸ್ಥಳಕ್ಕೆ ತಳ್ಳುತ್ತಿದ್ದ (ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು) ಅವರಿಬ್ಬರು ಯಾರು,

ಎಂದು ನಾನು ನನ್ನ ಸಂಗಡಿಗರಲ್ಲಿ ಪ್ರಶ್ನಿಸಿದೆ. ಆಗ್ಗ ಅವರು, ಕಾಲುವೆಯ ಮಧ್ಯದಲ್ಲಿರುವ ವ್ಯಕ್ತಿ, ಬಡ್ಡಿಕೋರ ವ್ಯಕ್ತಿ ಎಂದು ಉತ್ತರಿಸಿದರು. (ಬುಖಾರಿ)

ಬಡ್ಡಿಕೋರ ತನ್ನ ಸಂಗಡಿಗರ ರಕ್ತವನ್ನು ಹೀರುತ್ತಾನೆ ಎಂಬುದು ಸತ್ಯ. ಸಾಲಗಾರನ ಅಸಲು-ಬಾಕಿ ಇದ್ದು, ಬಡ್ಡಿಕೋರ, ಬಡ್ಡಿಯ ರೂಪದಲ್ಲಿ ಸಾಲಗಾರನ ಅಧಿಕ ಹಣವನ್ನು ಕಬಳಿಸುತ್ತಾನೆ. ಆತನ ಈ ಪಾಪಕ್ಕಾಗಿ, ಆತನಿಗೆ ರಕ್ತದ ಕಾಲುವೆಯ ಶಿಕ್ಷೆಯನ್ನು ವಿಧಿಸಲಾಗುವುದು.

ಹ. ಅಬೂ ಹುರೈರಾ(ರ) ಉಲ್ಲೇಖಿಸುತ್ತಾರೆ. ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು, ಮಿಅ್‌ರಾಜ್‌ನ ರಾತ್ರಿ, ನನ್ನನ್ನು ಕೆಲವು ವ್ಯಕ್ತಿಗಳ ಹತ್ತಿರ ಕೊಂಡೊಯ್ಯಲಾಯಿತು. ಅವರ ಹೊಟ್ಟೆಗಳು ಮನೆಗಳಂತಿದ್ದವು. ಅದರೊಳಗೆ ಹಾವುಗಳಿರುವುದು ಕಂಡು ಬರುತ್ತಿತ್ತು. ಇವರು ಯಾರು ಎಂದು ನಾನು ಜಿಬ್ರೀಲ್‌ರನ್ನು(ಅ) ಪ್ರಶ್ನಿಸಿದೆ. ಇವರು ಬಡ್ಡಿಕೋರರು ಎಂದು ಜಿಬ್ರೀಲ್‌ರು(ಅ) ಉತ್ತರಿಸಿದರು. (ಇಬ್ನುಮಾಜಃ)

## ತೂಕ - ಅಳತೆಯಲ್ಲಿ ಮೋಸ

ಮನುಷ್ಯ ಸಮಾಜದಲ್ಲಿ ತೂಕ ಮತ್ತು ಅಳತೆ ಇಲ್ಲದೆ ಜೀವಿಸುವುದು ಅಸಾಧ್ಯ. ಹೀಗಿರುತ್ತ ವರ್ತಕರು ಮತ್ತು ವ್ಯಾಪಾರಿಗಳು ಅತಿ ಹೆಚ್ಚು ಗಳಿಸುವ ದುರಾಸೆಯಲ್ಲಿ ತೂಕ ಮತ್ತು ಅಳತೆಯಲ್ಲಿ ಏರುಪೇರು ಮಾಡಿದಾಗ ಇಡೀ ಸಮಾಜ ತೊಂದರೆ ಅನುಭವಿಸಬೇಕಾಗುತ್ತದೆ. ಪ್ರವಾದಿ ಶುಐಬ್‌ರ(ಅ) ಜನಾಂಗ ತೂಕ ಮತ್ತು ಅಳತೆಯಲ್ಲಿ ಅತ್ಯಧಿಕ ಮೋಸ ಮಾಡುತ್ತಿತ್ತು ಎಂದು ಕುರ್‌ಆನಿನಿಂದ ತಿಳಿದು ಬರುತ್ತದೆ. ಅವರನ್ನು ಸಂಬೋಧಿಸಿ ಕುರ್‌ಆನ್ ಹೀಗೆ ಹೇಳುತ್ತದೆ.

**"ಓ ನನ್ನ ಜನಾಂಗ ಬಾಂಧವರೇ, ನ್ಯಾಯದೊಂದಿಗೆ ಪೂರ್ತಿಯಾಗಿ ಅಳತೆ ಮತ್ತು ತೂಕ ಮಾಡಿಕೊಡಿರಿ. ಜನರಿಗೆ ಅವರ ವಸ್ತುಗಳನ್ನು ಕಡಿಮೆ ಮಾಡಿಕೊಡಬೇಡಿರಿ ಮತ್ತು ಭೂಮಿಯಲ್ಲಿ ಕ್ಷೋಭೆ ಹರಡುತ್ತ ನಡೆಯಬೇಡಿರಿ."**

**(ಪವಿತ್ರ ಕುರ್‌ಆನ್, 11:85)**

ಅಳತೆ ಮತ್ತು ತೂಕದಿಂದ ಜನರನ್ನು ಮೋಸ ಮಾಡುವುದು ಕೂಡ, ಸಮಾಜದಲ್ಲಿ ಒಂದು ರೀತಿಯ ಕ್ಷೋಭೆಯನ್ನು ಹರಡುವುದಾಗಿದೆ. ಯಾಕೆಂದರೆ ಈ ಮೋಸದ ಪ್ರಭಾವ ಶ್ರೀಮಂತರು ಮತ್ತು ಬಡವರೆಲ್ಲರ ಮೇಲೆ ಬೀಳುತ್ತದೆ. ಪವಿತ್ರ ಕುರ್‌ಆನಿನಲ್ಲಿ ಹಲವು ಕಡೆ ತೂಕ ಮತ್ತು ಅಳತೆಯ ಮೋಸದ ಬಗ್ಗೆ ಆಜ್ಞೆಗಳು ಬಂದಿವೆ.

**"ಆಕಾಶವನ್ನು ಅವನು ಉನ್ನತಗೊಳಿಸಿದನು ಮತ್ತು ತಕ್ಕಡಿ ಸ್ಥಾಪಿಸಿದನು. ಆದುದರಿಂದ ನೀವು ಸಮತೋಲನವನ್ನು ಕೆಡಿಸಬೇಡಿ. ನ್ಯಾಯದೊಂದಿಗೆ ಸರಿಯಾಗಿ ತೂಗಿರಿ ಮತ್ತು ತೂಕದಲ್ಲಿ ಕಡಿತ ಮಾಡಬೇಡಿರಿ."**

**(ಪವಿತ್ರ ಕುರ್‌ಆನ್, 55:7-9)**

"ಅಳತೆ ಮಾಡಿಕೊಡುವಾಗ ಪೂರ್ಣ ತುಂಬಿಸಿ ಕೊಡಿರಿ. ತೂಗುವಾಗ ಸರಿಯಾದ ತಕ್ಕಡಿಯಲ್ಲಿ ತೂಗಿರಿ. ಇದು ಒಳ್ಳೆಯ ಕ್ರಮ ಮತ್ತು ಪರಿಣಾಮದ ದೃಷ್ಟಿಯಿಂದಲೂ ಇದುವೇ ಉತ್ತಮ." (ಪವಿತ್ರ ಕುರ್‌ಆನ್, 17:35)

ವ್ಯಾಪಾರಿ, ಪ್ರಾಮಾಣಿಕನೆಂದು ಪ್ರಸಿದ್ಧಿ ಪಡೆದಾಗ, ಗ್ರಾಹಕರು ಅವನಲ್ಲಿಗೆ ಹೋಗಲು ಇಷ್ಟಪಡುತ್ತಾರೆ ಮತ್ತು ಅದರೊಂದಿಗೆ ಪುನರುತ್ಥಾನದ ದಿನದಂದು ಅದರ ಪ್ರತಿಫಲವು ಬೇರೆಯೇ ದೊರಕುವುದು. ಸೂರಃ ಮುತಫ್ಫಿಫೀನ್‌ನಲ್ಲಿ ತೂಕ ಮತ್ತು ಅಳತೆಯಲ್ಲಿ ವಂಚನೆ ಮಾಡುವವರಿಗೆ ಕಠಿಣ ಶಿಕ್ಷೆಯ ಬಗ್ಗೆ ಎಚ್ಚರಿಸಲಾಗಿದೆ.

"ತೂಕದಲ್ಲಿ ಕಡಿತಗೊಳಿಸಿ ಕೊಡುವವರಿಗೆ ವಿನಾಶವಿದೆ- ಅವರು ಜನರಿಂದ ಪಡೆಯುವಾಗ ಸಂಪೂರ್ಣವಾಗಿ ಪಡೆಯುತ್ತಾರೆ. ಮತ್ತು ಅಳತೆ ಮಾಡಿ ಅಥವಾ ತೂಕ ಮಾಡಿ (ಜನರಿಗೆ) ಕೊಡುವಾಗ ಕಡಿಮೆ ಕೊಡುತ್ತಾರೆ. ಇವರನ್ನು ಎಬ್ಬಿಸಿ ತರಲಾಗುವುದೆಂದು ಇವರು ಗ್ರಹಿಸುವುದಿಲ್ಲವೇ? ಒಂದು ಮಹಾದಿನದಂದು- (ಅದು) ಎಲ್ಲ ಜನರೂ ಸರ್ವಲೋಕಗಳ ಪಾಲಕ ಪ್ರಭುವಿನ ಮುಂದೆ ನಿಲ್ಲುವ ದಿನವಾಗಿದೆ."

ಇದೇ ರೀತಿ ಹ. ಸುವೈದ್(ರ) ಬಿನ್ ಖೈಸ್ ವರದಿ ಮಾಡುತ್ತಾರೆ.

"ನಾನು ಮತ್ತು ಮಖ್‌ರಮ ಅಬದಿ ಹಿಜರ್(ಪ್ರದೇಶ)ನಿಂದ ವಸ್ತ್ರ ತಂದಾಗ, ಪ್ರವಾದಿ ಮುಹಮ್ಮದ್‌ರು(ಸ) ನಮ್ಮ ಹತ್ತಿರ ಬಂದು, ಒಂದು ಇಜಾರಿನ ಬೆಲೆಯನ್ನು ವಿಚಾರಿಸಿದರು. ನಾನು ಓರ್ವ ತೂಕ ಮಾಡುವವನನ್ನು ತಿಂಗಳ ಸಂಭಾವನೆಯೊಂದಿಗೆ ನೇಮಿಸಿದ್ದೆ. ಪ್ರವಾದಿ ಮುಹಮ್ಮದ್‌ರು(ಸ) ತೂಕ ಮಾಡುವವನೊಡನೆ, ತೂಕ ಮಾಡು ಮತ್ತು ಬಾಗಿಸುತ್ತ ತೂಕ ಮಾಡು ಎಂದು ಹೇಳಿದರು." (ತಿರ್ಮಿದಿ)

ಇದರರ್ಥ, ಜನರಿಗೆ ತೂಕ ಮತ್ತು ಅಳತೆ ಮಾಡಿ ಕೊಡುವಾಗ, ಸರಿಯಾಗಿ ತೂಗಿ ಕೊಡಿ ಮತ್ತು ಸ್ವಲ್ಪ ಹೆಚ್ಚೇ ಕೊಡಿ ಎಂದಾಗಿದೆ.

ಪ್ರಾಮಾಣಿಕತೆಯಿಂದ ತೂಕ ಮತ್ತು ಅಳತೆ ಮಾಡಿ ಕೊಡುವ ಸಮಾಜದಲ್ಲಿ ಸುಖ, ಶಾಂತಿ, ಸಮೃದ್ಧಿ ಇರುತ್ತದೆ.

"ಯಹ್ಯಾ ಬಿನ್ ಸಈದ್(ರ) ವರದಿ ಮಾಡುತ್ತಾರೆ. ಹ. ಸಈದ್ ಬಿನ್ ಮುಸಯ್ಯಬ್(ರ) ಹೀಗೆ ಹೇಳುತ್ತಿದ್ದರು. ನೀವು, ಜನರು ಪ್ರಾಮಾಣಿಕವಾಗಿ ತೂಕ ಮತ್ತು ಅಳತೆ ಮಾಡಿ ಕೊಡುವ ದೇಶಕ್ಕೆ ಹೋದರೆ, ಅಲ್ಲಿ ಹೆಚ್ಚು ಕಾಲ ನಿಲ್ಲಿ ಮತ್ತು ಅಳತೆ, ತೂಕದಲ್ಲಿ ವಂಚಿಸುವ ದೇಶಕ್ಕೆ ಹೋದರೆ ಹೆಚ್ಚು ಸಮಯ ನಿಲ್ಲದಿರಿ." (ಮುವತ್ತಾ)

## ಅಕ್ರಮ ದಾಸ್ತಾನು

ಜನಸಾಮಾನ್ಯರನ್ನು ಶೋಷಣೆಗೆ ಒಳಪಡಿಸುವ ಇನ್ನೊಂದು ವಿಧಾನ ಅಕ್ರಮ ದಾಸ್ತಾನು. ಅಕ್ರಮ ದಾಸ್ತಾನು ಎಂದರೆ ವ್ಯಾಪಾರಿ ಒಂದು ವಸ್ತು ಅಥವಾ ಅನೇಕ

ವಸ್ತುಗಳನ್ನು ಶೇಖರಿಸಿ ಪೇಟೆಗೆ ಬರದಂತೆ ತಡೆ ಹಿಡಿಯುವುದು ಮತ್ತು ಪೇಟೆಯಲ್ಲಿ ಆ ವಸ್ತುವಿನ ಅಭಾವ ಕಂಡಾಗ ಅದರ ಕ್ರಯವನ್ನು ಏರಿಸಿ ವ್ಯಾಪಾರಿಗಳು ತಾವು ಶೇಖರಿಸಿದ ಅಕ್ರಮ ದಾಸ್ತಾನನ್ನು ಹೆಚ್ಚು ಕ್ರಯದಲ್ಲಿ ಮಾರಿ ಹೆಚ್ಚು ಲಾಭ ಪಡೆಯುವುದಾಗಿದೆ. ಈ ರೀತಿ ವಸ್ತುಗಳ ಕೃತಕ ಅಭಾವ ಸೃಷ್ಟಿಸಿ ಜನಸಾಮಾನ್ಯರಿಗೆ ತೊಂದರೆ ಕೊಟ್ಟು ಸ್ವತಃ ಲಾಭ ಪಡೆಯುವುದು ದುರಾಸೆಯ ನೀಚ ಕೃತ್ಯ ಮತ್ತು ಘೋರ ಪಾಪವಾಗಿದೆ.

ಹ. ಮುಅಮ್ಮರ್ ಬಿನ್ ಅಬ್ದುಲ್ಲಾ ಉಲ್ಲೇಖಿಸುತ್ತಾರೆ. ಪ್ರವಾದಿ ಮುಹಮ್ಮದ್(ಸ) ಹೇಳಿದರು. "ಪಾಪಿಯಾದವನು ಮಾತ್ರ ಅಕ್ರಮ ದಾಸ್ತಾನು ಮಾಡುತ್ತಾನೆ." (ಮುಸ್ಲಿಮ್)

## ಕಲಬೆರಕೆ ಮತ್ತು ದೋಷ

ಸಂಪತ್ತಿನ ದುರಾಸೆಯಲ್ಲಿ ಮನುಷ್ಯ ಸ್ವಾರ್ಥಿಯಾಗಿ ಮರಣೋತ್ತರ ಜೀವನವನ್ನು ಕೂಡ ಮರೆಯುತ್ತಾನೆ. ಹೆಚ್ಚೆಚ್ಚು ಸಂಪಾದಿಸುವ ಭರದಲ್ಲಿ, ತನ್ನ ಮೋಸದಿಂದ ಪಡೆಯುವ ಸಂಪತ್ತಿನಿಂದ, ಜನಸಾಮಾನ್ಯರನ್ನು ಕಷ್ಟದಲ್ಲಿ ಸಿಲುಕಿಸುತ್ತಾನೆ ಎಂದು ಆ ವ್ಯಕ್ತಿ ಅರಿಯುವುದಿಲ್ಲ. ಆಹಾರ ಪದಾರ್ಥ, ವಿಶೇಷವಾಗಿ ಔಷಧ ಪದಾರ್ಥಗಳಲ್ಲಿ ಕಲಬೆರಕೆ ಮಾಡಿ, ತನ್ನ ತಿಜೋರಿಯನ್ನು ತುಂಬಿಸಲು ಅಸಂಖ್ಯಾತ ಜನರ ಆರೋಗ್ಯ ಕೆಡಿಸುತ್ತಾನೆ, ರೋಗ ಉಲ್ಬಣಿಸುವಂತೆ ಮಾಡುತ್ತಾನೆ ಮತ್ತು ಕೆಲವೊಮ್ಮೆ ಇದರಿಂದ ಪ್ರಾಣವನ್ನೂ ಕಳೆಯಬೇಕಾಗುತ್ತದೆ. ಇವರು ಕೊಲೆಗಡುಕರಾಗಿದ್ದರೂ, ತಮ್ಮನ್ನು ಕೊಲೆಗಾರರೆಂದು ಪರಿಗಣಿಸುವುದಿಲ್ಲ. ಸಾಮಾನ್ಯ ಕೊಲೆಗಾರ, ಕೊಲೆಯ ಅಪರಾಧದಲ್ಲಿ ಸೆರೆ ಹಿಡಿಯಲಾಗಿ ಮರಣ ದಂಡನೆಯನ್ನು ಪಡೆಯುತ್ತಾರೆ ಮತ್ತು ಇದರ ಮೂಲಕ ಅನೇಕ ಜನರು ರಕ್ಷಿಸಲ್ಪಡುತ್ತಾರೆ. ಆದರೆ ಇಂತಹ ಕೊಲೆಗಾರರಿಂದ ಜನಸಾಮಾನ್ಯರನ್ನು ರಕ್ಷಿಸಲು, ನೇಣುಗಂಬದ ತನಕ ಒಯ್ಯುವವರು ಯಾರೂ ಇಲ್ಲ. ಅವರು ಜೀವನ ಸಾಗಿಸುತ್ತ, ಕೊಲೆಯ ಮೇಲೆ ಕೊಲೆಯನ್ನು ಮಾಡುತ್ತಿರುತ್ತಾರೆ. ತನ್ನ ದಾಸರನ್ನು ಒಂದು ತಾಯಿಗಿಂತ 70 ಪಟ್ಟು ಹೆಚ್ಚು ಪ್ರೀತಿಸುವ ಅಲ್ಲಾಹನು, ಮುಗ್ಧ ಜನರ ಕೊಲೆಯಾಗುತ್ತಿರುವುದನ್ನು ಅರಿತು, ಕೊಲೆಗಾರರನ್ನು ಸುಮ್ಮನೆ ಬಿಟ್ಟು ಬಿಡುವನೆ?

"ಹ. ಅಬೂ ಮೂಸಾ(ರ) ವರದಿ ಮಾಡುತ್ತಾರೆ. ಪ್ರವಾದಿ ಮುಹಮ್ಮದ್(ಸ) ಹೇಳಿದರು ಘಾತುಕನಿಗೆ ಅಲ್ಲಾಹನು ಕಾಲಾವಕಾಶವನ್ನು ಕೊಡುತ್ತಾನೆ. ಆದರೆ ಒಂದು ದಿನ ಹಿಡಿಯುತ್ತಾನೆ. ಹಿಡಿದ ನಂತರ ಆತನನ್ನು ಬಿಡುವುದಿಲ್ಲ. ನಂತರ ಈ ಸೂಕ್ತವನ್ನು ಪಠಿಸಿದರು.

وَكَذٰلِكَ اَخۡذُ رَبِّكَ اِذَاۤ اَخَذَ الۡقُرٰى وَهِىَ ظَالِمَةٌ ؕ اِنَّ اَخۡذَهٗۤ اَلِيۡمٌ شَدِيۡدٌ

"ನಿಮ್ಮ ಪ್ರಭು ಯಾವುದಾದರೂ ಅಕ್ರಮಿ ನಾಡನ್ನು ಹಿಡಿಯುವಾಗ ಅವನ ಹಿಡಿತ ಹೀಗೆಯೇ ಇರುತ್ತದೆ. ವಾಸ್ತವದಲ್ಲಿ ಅವನ ಹಿಡಿತವು ಬಹಳ ಬಿಗಿಯೂ ವೇದನಾಯುಕ್ತವೂ ಆಗಿರುತ್ತದೆ." (ಪವಿತ್ರ ಕುರ್‌ಆನ್, 11:102)

(ಮತ್ತು ನಿನ್ನ ಪ್ರಭು ಘಾತುಕ ನಗರಗಳನ್ನು ಹಿಡಿದಾಗ, ಆತನ ಹಿಡಿತ ಹೇಗಿರುವುದೆಂದರೆ - ನಿಜವಾಗಲೂ ಆತನ ಹಿಡಿತ ಬಹಳ ಕಠಿಣ ಮತ್ತು ಭಯಾನಕವಾಗಿರುವುದು) (ಮುಸ್ಲಿಮ್)

ಇಂತಹ ಜನರು ದೋಷವುಳ್ಳ ವಸ್ತುಗಳನ್ನೂ, ದೋಷಮುಕ್ತ ಎಂದು ಹೇಳಿ ಜನರಿಗೆ ನಷ್ಟ ಉಂಟು ಮಾಡಿ ತಮ್ಮ ತಿಜೋರಿಯನ್ನು ತುಂಬುತ್ತಾರೆ. ಇಂತಹವರು ಅಲ್ಲಾಹನ ಅಪರಾಧಿಗಳಾಗಿದ್ದಾರೆ. ಪ್ರಾಮಾಣಿಕ ವ್ಯಾಪಾರಿ ದೋಷವುಳ್ಳ ಸಾಮಾನಿನ ಬಗ್ಗೆ ಗ್ರಾಹಕನಿಗೆ ಹೇಳುತ್ತಾನೆ. ಗ್ರಾಹಕ ತಿಳಿದು, ಆ ದೋಷವುಳ್ಳ ಪದಾರ್ಥವನ್ನು ಖರೀದಿಸುವುದು ಗ್ರಾಹಕನ ಇಚ್ಛೆ. ಆದರೆ ದೋಷವನ್ನು ಮರೆಸಿ ಗ್ರಾಹಕರಿಗೆ ವಂಚಿಸುವುದು ಅತಿ ದೊಡ್ಡ ಪಾಪ.

ಹ. ಅಬೂಹುರ್ರೈರಾ(ರ) ಉಲ್ಲೇಖಿಸುತ್ತಾರೆ. ಒಮ್ಮೆ ಪ್ರವಾದಿ ಮುಹಮ್ಮದ್‌ರು(ಸ) ಧಾನ್ಯದ ರಾಶಿಯ ಹತ್ತಿರದಿಂದ ಹಾದು ಹೋಗುತ್ತಿದ್ದರು. ಅವರು ಅದರ ಒಳಗೆ ತನ್ನ ಕೈಯನ್ನು ಹಾಕಿದಾಗ ಧಾನ್ಯಗಳು ತೇವ ಇದ್ದಂತೆ ಅನಿಸಿತು. (ಕಾರಣ ಧಾನ್ಯ ಒಳಗಿನಿಂದ ಒದ್ದೆ ಆಗಿತ್ತು). ಪ್ರವಾದಿ ಮುಹಮ್ಮದ್‌ರು(ಸ) ವ್ಯಾಪಾರಿಯೊಡನೆ 'ಇದು ಏನು?' ಎಂದು ಪ್ರಶ್ನಿಸಿದರು (ಧಾನ್ಯ ಒಳಗಿನಿಂದ ಒದ್ದೆ ಆಗಿರುವುದು ಯಾಕೆ) ಮಳೆಯ ಕಾರಣ ಧಾನ್ಯಗಳು ಒದ್ದೆ ಆಗಿದೆ ಪ್ರವಾದಿವರ್ಯರೇ(ಸ) ಎಂದು ವ್ಯಾಪಾರಿ ಉತ್ತರಿಸಿದ. ಹಾಗಾದರೆ ಒದ್ದೆ ಇರುವ ಧಾನ್ಯಗಳನ್ನು ಜನರಿಗೆ ಗೋಚರಿಸುವಂತೆ ಯಾಕೆ ಇಡಲಿಲ್ಲ ಎಂದು ಕೇಳಿದರು. (ಮತ್ತು ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು) ಮೋಸಗಾರನಿಗೆ ನನ್ನಿಂದ ಯಾವುದೇ ರೀತಿಯ ಸಂಬಂಧ ಇರುವುದಿಲ್ಲ. (ಮುಸ್ಲಿಮ್)

ಇದೇ ರೀತಿ ಉಕ್ಬಾ ಬಿನ್ ಆಮಿರ್(ರ) ವರದಿ ಮಾಡುತ್ತಾರೆ ಏನೆಂದರೆ-

ನ್ಯೂನತೆಯುಳ್ಳ ವಸ್ತುವಿನ ಬಗ್ಗೆ ಅರಿವಿದ್ದು, ಅದನ್ನು ಮಾರುವುದು ನಿಷಿದ್ಧ. ಆದರೆ ಗ್ರಾಹಕನಿಗೆ ಆ ಬಗ್ಗೆ ತಿಳಿಯಪಡಿಸಿ ಮಾರುವುದರಲ್ಲಿ ಅಭ್ಯಂತರವಿಲ್ಲ. (ಬುಖಾರಿ)

ಕೆಲವೊಮ್ಮೆ ಕಲಾ ಕೌಶಲ್ಯಗಾರನ ಕಲೆ ಅದರ ಸೌಂದರ್ಯ, ಬಾಳ್ವಿಕೆ ಮತ್ತು ಪ್ರಯೋಜನದ ಕಾರಣ ಜನಸಾಮಾನ್ಯರಲ್ಲಿ ಮೆಚ್ಚುಗೆಯನ್ನು ಪಡೆಯುತ್ತದೆ. ಕಲೆಗಾರ ಬುದ್ಧಿವಂತನಾಗಿದ್ದರೆ, ಮಾರುಕಟ್ಟೆಯಲ್ಲಿ ತನ್ನ ಕಲೆಯ ಮೆಚ್ಚುಗೆಯನ್ನು ಜಾರಿಯಲ್ಲಿಡಲು, ಕಲೆಯ ಗುಣಮಟ್ಟವನ್ನು ಉತ್ತಮಗೊಳಿಸಲು ಪ್ರಯತ್ನಿಸುತ್ತಾನೆ. ಒಂದು ವೇಳೆ ದುರಾಸೆಯು ಅವನಲ್ಲಿ ಪ್ರವೇಶಿಸಿದರೆ, ಅತಿ ಹೆಚ್ಚು ಗಳಿಸುವ ಆಸೆಯಲ್ಲಿ ಆ ಕಲೆಯ ಮೆಚ್ಚುಗೆಯನ್ನು ಕಡೆಗಣಿಸಿ ಆತ ಎರಡನೆಯ ಸಲ ತನ್ನ ಕಲೆಯಲ್ಲಿ ಕಲಬೆರಕೆಯನ್ನು ಮಾಡುತ್ತಾನೆ. ಕೆಳಮಟ್ಟದ ವಸ್ತುವನ್ನು ಉಪಯೋಗಿಸಿ ಅಲ್ಪ ಖರ್ಚಿನಲ್ಲಿ ಕಲಾಕೃತಿಯನ್ನು ತಯಾರಿಸುತ್ತಾನೆ. ಇದರಿಂದ ಆ ವಸ್ತುವಿನ ದೃಢತೆಯು ನಶಿಸಿ ಹೋಗುತ್ತದೆ. ಆದರೆ ಇದನ್ನು ಅರಿಯದ ಗ್ರಾಹಕ, ಮೊದಲಿನಷ್ಟೇ ಹಣ ತೆತ್ತು ಅದನ್ನು ಪಡೆದು ವಂಚನೆಗೆ ಗುರಿಯಾಗುತ್ತಾನೆ. ಈ ವಂಚನೆಯ ಕಾರಣ ಕಲೆಗಾರ ಮರಣೋತ್ತರ ಜೀವನದಲ್ಲಿ ಶಿಕ್ಷೆ ಅನುಭವಿಸುವುದು ಮಾತ್ರವಲ್ಲದೆ, ಆತನ ವಸ್ತುವಿನ ವಿಶ್ವಾಸಾರ್ಹತೆಯು ಕಳೆದು ಹೋಗಿ ಜನರು ಅದನ್ನು ಖರೀದಿಸುವುದನ್ನು ನಿಲ್ಲಿಸುತ್ತಾರೆ. ಇದರ ಪರಿಣಾಮ ಆತನ ಸಂಪತ್ತಿನ ಮೇಲೆ ಕೂಡ ಬೀಳುತ್ತಿದೆ.

## ಹುದ್ದೆಯಿಂದ, ಧರ್ಮ ಮತ್ತು ಕಾನೂನು ಬಾಹಿರ ಲಾಭ ಪಡೆಯುವುದು

ಅಬೂ ಹುಮೈದ್ ಸಾಇದೀ ಹೇಳುತ್ತಾರೆ. ಒಮ್ಮೆ ಪ್ರವಾದಿಯವರು(ಸ) ಒಬ್ಬರನ್ನು ಬನೂ ಸಲೀಮ್ ಗೋತ್ರದ ಕಡೆಗೆ ಝಕಾತ್ ಸಂಗ್ರಹಿಸಲು ಅಧಿಕಾರಿಯನ್ನಾಗಿ ನೇಮಿಸಿ ಕಳುಹಿಸಿದರು. ಅವರನ್ನು ಇಬ್ನು ತಬಿಯ್ಯ ಎಂದು ಕರೆಯಲಾಗುತ್ತಿತ್ತು. ಆತ (ಹಿಂದಿರುಗಿದಾಗ) ಪ್ರವಾದಿ ಮುಹಮ್ಮದ್‌ರಿಗೆ(ಸ) ಲೆಕ್ಕವನ್ನು ಕೊಟ್ಟು, (ಪ್ರವಾದಿ ಮುಹಮ್ಮದ್‌ರು(ಸ) ಲೆಕ್ಕವನ್ನು ಪಡಕೊಂಡರು) ಇದು ನಿಮ್ಮ ಲೆಕ್ಕದ ಹಣ ಮತ್ತು ಇದು ನನ್ನ ಉಡುಗೊರೆ (ನನಗೆ ಸಿಕ್ಕಿದ್ದು) ಎಂದು ಹೇಳಿದನು. ಅದಕ್ಕೆ ಪ್ರವಾದಿ ಮುಹಮ್ಮದ್‌ರು(ಸ) ನೀನು ಸತ್ಯ ನುಡಿಯುತ್ತಿರುವಿ ಎಂದಾದರೆ, ಉಡುಗೊರೆಯನ್ನು ಪಡೆಯಲು ನೀನು ನಿನ್ನ ಮಾತಾಪಿತರ ಮನೆಯಲ್ಲಿ ಯಾಕೆ ಉಳಿಯಲಿಲ್ಲ ಎಂದು ಪ್ರಶ್ನಿಸಿದರು. ನಂತರ ಪ್ರವಾದಿವರ್ಯರು(ಸ) ನಮ್ಮನ್ನು ಉದ್ದೇಶಿಸಿ, ಅಲ್ಲಾಹನ ಪ್ರಶಂಸೆ ಮತ್ತು ಗುಣಗಾನವನ್ನು ಮಾಡುತ್ತಾ ಹೇಳಿದರು- ಅಲ್ಲಾಹನು ನನಗೆ ವಹಿಸಿರುವಂತಹ ಜವಾಬ್ದಾರಿಗಳಲ್ಲಿ, ಕೆಲವೊಂದನ್ನು ನಾನು ನಿಮಗೆ ವಹಿಸಿ, ಅಧಿಕಾರಿಗಳನ್ನಾಗಿ ನೇಮಿಸುತ್ತೇನೆ. ನಂತರ ಆತ ಸರಕಾರಿ ಜವಾಬ್ದಾರಿಯನ್ನು ಮುಗಿಸಿ ಹಿಂದಿರುಗಿ, ಇದು ನಿಮ್ಮ ಸಂಪತ್ತು ಮತ್ತು ಇದು ನನಗೆ ಸಿಕ್ಕ ಉಡುಗೊರೆ ಎಂದು ಹೇಳುತ್ತಾನೆ. ಹಾಗಾದರೆ ಉಡುಗೊರೆಯನ್ನು ಪಡೆಯಲು ಆತ ತನ್ನ ಮಾತಾಪಿತರ ಮನೆಯಲ್ಲಿ ಯಾಕೆ ಉಳಿಯಲಿಲ್ಲ. ಅಲ್ಲಾಹನಾಣೆ! ಯಾರಾದರೂ ಇನ್ನೊಬ್ಬರ ವಸ್ತುವನ್ನು ಪಡೆದುಕೊಂಡರೆ ಪುನರುತ್ಥಾನದ ದಿನದಂದು ಅಲ್ಲಾಹನು ಅದನ್ನು ಅವರ ಕೊರಳ ಮೇಲೆ ಹಾಕುವನು. ಅಂದು, ಚಡಪಡಿಸುವ ಒಂಟೆ, ಕಿರುಚುವ ದನ ಅಥವಾ ಕೂಗುವ ಆಡನ್ನು ತನ್ನ ಕೊರಳಲ್ಲಿ ಹಾಕಿ ಅಲ್ಲಾಹನ ಮುಂದೆ ಹಾಜರಾಗುವ ಪ್ರತಿಯೊಬ್ಬರನ್ನು ನಾನು ಗುರುತಿಸುವೆನು. (ಆ ಪ್ರಾಣಿಯನ್ನು ಆತ ವಂಚಿಸಿ ಪಡೆದ ಕಾರಣ) ನಂತರ ಪ್ರವಾದಿವರ್ಯರು(ಸ) ತನ್ನ ಕಂಕುಳ ಬಿಳಿ ಗೋಚರಿಸುವಷ್ಟು ಎತ್ತರಕ್ಕೆ ಕೈಯನ್ನು ಮೇಲಕ್ಕೆ ಎತ್ತಿದರು. ಮತ್ತು ಹೇಳಿದರು, ಓ ಅಲ್ಲಾಹನೇ, ನಾನು (ನಿನ್ನ ಸಂದೇಶವನ್ನು ದಾಸರಿಗೆ) ಮುಟ್ಟಿಸಿದೆ. (ಇದನ್ನು ಅಬೂ ಹುಮೈದ್ ಸಾಇದೀ ವರದಿ ಮಾಡಿದರು) ಇದನ್ನು (ಪ್ರವಾದಿವರ್ಯರು(ಸ) ಹೀಗೆ ಮಾಡುವುದನ್ನು) ನಾನು ಕಣ್ಣಾರೆ ಕಂಡಿದ್ದೇನೆ ಮತ್ತು ಹೇಳಿದ್ದೇನೆ ಎಂದು ಹೇಳಿದರು. (ಬುಖಾರಿ)

ಸರಕಾರಿ ನೌಕರರು, ಕೇವಲ ಸರಕಾರಿ ನೌಕರರು ಎಂಬ ಕಾರಣಕ್ಕೆ ಸಿಕ್ಕಿದ ಉಡುಗೊರೆಯನ್ನು ಪಡೆಯಬಾರದು ಎಂದು ಈ ಹದೀಸಿನಿಂದ ತಿಳಿದು ಬರುತ್ತದೆ. ಈತ ಸರಕಾರಿ ನೌಕರನಾಗಿರದೆ, ತನ್ನ ಮಾತಾಪಿತರ ಮನೆಯಲ್ಲಿ ಉಳಿಯುತ್ತಿದ್ದರೆ, ಜನರು ಉಡುಗೊರೆಯನ್ನು ಆತನ ಮನೆಗೆ ಹೋಗಿ ಕೊಡುತ್ತಿದ್ದರೆ? ಆದುದರಿಂದ ಇಂತಹ ಲಾಭ ಪಡೆಯುವುದು ನಿಷಿದ್ಧವಾಗಿದೆ. ಇಲ್ಲಿ ಪ್ರವಾದಿವರ್ಯರು(ಸ) ಒಂಟೆ, ದನ ಮತ್ತು ಆಡಿನ ಬಗ್ಗೆ ಪ್ರಸ್ತಾಪಿಸಿರುವ ಕಾರಣ, ಆ ಕಾಲದಲ್ಲಿ ಸೊತ್ತಿನ ರೂಪದಲ್ಲಿ ಪ್ರಾಣಿಗಳನ್ನು ಇಡಲಾಗುತ್ತಿತ್ತು. ಇಲ್ಲಿ ಪ್ರಾಣಿಗಳ ಬಗ್ಗೆ ಪ್ರಸ್ತಾಪಿಸುವುದರ ಅರ್ಥ ಸಂಪತ್ತನ್ನು ಯಾವ

ರೂಪದಲ್ಲೂ ಉಡುಗೊರೆಯಾಗಿ ಪಡೆಯಬಾರದು ಎಂದಾಗಿದೆ. ಈ ಕಾಲದಲ್ಲಿ ಹಣವನ್ನು ಉಡುಗೊರೆಯ ರೂಪದಲ್ಲಿ ಅಥವಾ ಸಂಪತ್ತಿನ ರೂಪದಲ್ಲಿ ಉಪಯೋಗಿಸಲಾಗುತ್ತಿದೆ. ಭವಿಷ್ಯದಲ್ಲಿ ಹಣದ ಬದಲಿಗೆ ಬೇರೆ ವಸ್ತು ಮಾನ್ಯತೆ ಪಡೆದರೆ ಅದನ್ನು ಉಪಯೋಗಿಸ ಲಾಗುವುದು. ಅರ್ಥಾತ್ ಸರಕಾರಿ ನೌಕರರಿಗೆ ಜನ ಸಾಮಾನ್ಯರಿಂದ ಯಾವುದೇ ರೀತಿಯ ಅಥವಾ ರೂಪದ ಕಾಣಿಕೆ ಅಥವಾ ಇನಾಮುಗಳನ್ನು ಪಡೆಯುವ ಹಕ್ಕಿಲ್ಲ ಎಂದಾಗಿದೆ. ಈ ರೀತಿಯ ನಿಷಿದ್ಧ ಮಾರ್ಗದಿಂದ ಯಾರಾದರೂ ಸಂಪತ್ತನ್ನು ಪಡೆದರೆ, ಪುನರುತ್ಥಾನದ ದಿನದಂದು, ಆತ ಅಪಮಾನ ಮತ್ತು ಕಠಿಣ ಶಿಕ್ಷೆಗೆ ಗುರಿಯಾಗುವನು.

ಸರಕಾರಿ ನೌಕರರು, ಸರಕಾರಿ ಖಜಾನೆಯಿಂದ ಅನುಮತಿಯ ವಿನಹ ಏನನ್ನೂ ಪಡೆಯಬಾರದು ಎಂದು ಈ ಕೆಳಗಿನ ಹದೀಸಿನಿಂದ ಸ್ಪಷ್ಟವಾಗುತ್ತದೆ.

"ಅಬ್ದುಲ್ಲಾ ಬಿನ್ ಬುರೈದ(ರ) ತಮ್ಮ ತಂದೆಯಿಂದ ವರದಿ ಮಾಡುತ್ತಾರೆ, ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು, ನಾವು ಯಾರನ್ನಾದರೂ, ಅವರ ಸಂಬಳವನ್ನು ಸರಕಾರಿ ಕೆಲಸಕ್ಕಾಗಿ ನಿಗದಿಪಡಿಸಿ, ಅಧಿಕಾರಿಯನ್ನಾಗಿ ನೇಮಿಸಿದರೆ, ಆತ (ಸಂಬಳ) ಅದರ ಹೊರತು ಇನ್ನೇನನ್ನಾದರೂ (ಸ್ವಇಚ್ಛೆಯಿಂದ) ಪಡೆದರೆ, ಅದುವೇ ವಿಶ್ವಾಸಘಾತುಕವಾಗಿದೆ."

(ಅಬೂ ದಾವೂದ್)

ಇದೇ ರೀತಿ ಅದಿಯ್ಯ್ ಬಿನ್ ಉಮೈದ ಕಿಂದಿ(ರ) ವರದಿ ಮಾಡುತ್ತಾರೆ: "ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳುವುದನ್ನು ನಾನು ಕೇಳಿದ್ದೇನೆ. ನಿಮ್ಮಲ್ಲಿ ಯಾರನ್ನಾದರೂ ನಾವು ಒಂದು ಕೆಲಸಕ್ಕಾಗಿ ನೇಮಿಸಿದರೆ (ಎಂದರೆ ಸರಕಾರಿ ನೌಕರನನ್ನಾಗಿ) ಅದರ ನಂತರ ಆತ ಒಂದು ಸೂಜಿ ಅಥವಾ ಅದಕ್ಕಿಂತ ಸಣ್ಣ ವಸ್ತುವನ್ನು ನಮ್ಮಿಂದ ಅಡಗಿಸಿದರೆ ಅದು ವಂಚನೆ ಆಗುವುದು. ಮತ್ತು ಪುನರುತ್ಥಾನದ ದಿನದಂದು ಆತ ಆ ವಸ್ತುವಿನೊಂದಿಗೆ ಹಾಜರಾಗುವನು. ಅಷ್ಟರಲ್ಲಿ, ಓರ್ವ ಕಪ್ಪಗಿನ ಅನ್ಸಾರಿ ಎದ್ದು ನಿಂತು, ಪ್ರವಾದಿವರ್ಯರೇ(ಸ), ತಾವು (ನನ್ನನ್ನು ಅಧಿಕಾರಿಯನ್ನಾಗಿ ಮಾಡಿದ ಈ ಕೆಲಸ) ನನ್ನಿಂದ ವಾಪಾಸು ಪಡೆಯಿರಿ ಎಂದು ಹೇಳಿದರು. ಪ್ರವಾದಿ ಮುಹಮ್ಮದ್‌ರು(ಸ) ಯಾಕೆ ಏನಾಯಿತು? ಎಂದು ಪ್ರಶ್ನಿಸಿದರು. ಆತ ಹೇಳಿದ ತಾವು(ಸ) ಈ ರೀತಿ ಹೇಳುವುದನ್ನು ನಾನು ಕೇಳಿದೆ. (ಅಂದರೆ ಸೂಜಿ ಅಥವಾ ಅದಕ್ಕಿಂತ ಸಣ್ಣ ವಸ್ತುವನ್ನು ಕೂಡ ಅಡಗಿಸಿದವನನ್ನು ಪುನರುತ್ಥಾನದ ದಿನದಂದು ಪ್ರಶ್ನಿಸಲಾಗುವುದು. ಆದುದರಿಂದ ನೀವು ನನಗೆ ವಹಿಸಿದಂತಹ ಅಧಿಕಾರವನ್ನು ವಾಪಾಸು ಪಡೆದರೆ ಉತ್ತಮ) ಪ್ರವಾದಿ ಮುಹಮ್ಮದ್‌ರು(ಸ) ಮಗದೊಮ್ಮೆ, ನಿಮ್ಮಲ್ಲಿ ಯಾರಾದರೂ, ಸೂಜಿ ಅಥವಾ ಅದಕ್ಕಿಂತ ಸಣ್ಣ ವಸ್ತುವನ್ನು, ನಾನು ಸರಕಾರಿ ನೌಕರನನ್ನಾಗಿ ನೇಮಿಸಿದ ನಂತರ ಪಡೆದರೆ, ಆತ ಪುನರುತ್ಥಾನದ ದಿನದಂದು ಆ ವಸ್ತುವಿನೊಂದಿಗೆ ಹಾಜರಾಗುವನು ಎಂದು ಪುನರಾವರ್ತಿಸಿದರು. ನಿಮಗೆ ಕೊಟ್ಟಿದ್ದನ್ನು ಸ್ವೀಕರಿಸಿ ಮತ್ತು ಕೊಡದ್ದರಿಂದ ದೂರವಿರಿ.

(ಅನುಮತಿ ಇಲ್ಲದೆ ಇನ್ನೊಬ್ಬರ ಸೊತ್ತಿನ ಮಾಲೀಕನಾಗುವುದು ವಂಚನೆ ಆಗಿದೆ)

(ಮುಸ್ಲಿಮ್)

ಯಾರು ತಮ್ಮ ಹುದ್ದೆ ಮತ್ತು ಅಧಿಕಾರಗಳ ಮುಖಾಂತರ ಅನ್ಯಾಯವಾಗಿ ಲಾಭ ಪಡೆಯುತ್ತಾ:

❖ ಯೋಗ್ಯತೆಯುಳ್ಳವರನ್ನು ನಿರ್ಲಕ್ಷಿಸಿ, ಅಯೋಗ್ಯ ಮಕ್ಕಳಿಗೆ ಅಥವಾ ಸಂಬಂಧಿಕರಿಗೆ ಹುದ್ದೆ ಕೊಡುತ್ತಾರೋ ಅಥವಾ ಕೊಡಿಸುತ್ತಾರೋ.

❖ ಯೋಗ್ಯ ಯುವಕರನ್ನು ನಿರ್ಲಕ್ಷಿಸಿ, ತಮ್ಮ ಅಯೋಗ್ಯ ನೆಂಟರಿಷ್ಟರಿಗೆ ಪಿಂಚಣಿ ಅಥವಾ ವಿದ್ಯಾರ್ಥಿ ವೇತನ ಮತ್ತು ಮಾನ್ಯತೆಗೆ ಅರ್ಹರೆಂದು ಬಗೆಯುತ್ತಾರೋ.

❖ ಸರಕಾರಿ ಸೊತ್ತು, ಆಸ್ತಿಪಾಸ್ತಿಗಳನ್ನು ತಮ್ಮ ಮನ ಬಂದಂತೆ ಉಪಯೋಗಿಸುತ್ತಾರೋ ಮತ್ತು ತಮ್ಮ ಸಂಬಂಧಿಕರನ್ನು ಮನಬಂದಂತೆ ಉಪಯೋಗಿಸುವಂತೆ ಮನ್ನಣೆ ನೀಡುತ್ತಾರೋ.

❖ ಸರಕಾರಿ ವೇತನವನ್ನು ಕಬಳಿಸಿ, ಮನಬಂದಂತೆ ಸೂರೆಗೈಯುತ್ತಾರೋ

❖ ಅಂತಾರಾಷ್ಟ್ರೀಯ ವ್ಯಾಪಾರಿ ಒಪ್ಪಂದಗಳ ಕರಾರು ಮಾಡುವಾಗ, ದೇಶದ ಹಿತವನ್ನು ನಿರ್ಲಕ್ಷಿಸಿ, ತನ್ನ ಸ್ವಂತ ಲಾಭಕ್ಕೆ ಹೆಚ್ಚು ಮಾನ್ಯತೆ ಕೊಡುತ್ತಾರೋ.

❖ ತಮ್ಮ ಹುದ್ದೆಯ ಮುಖಾಂತರ, ತನ್ನ ಸ್ವಂತ ಆಸ್ತಿಪಾಸ್ತಿ, ಜಮೀನು ಕೈಗಾರಿಕೆ ಮತ್ತು ವಾಣಿಜ್ಯ ವ್ಯಾಪಾರ ಇತ್ಯಾದಿ ಇತ್ಯಾದಿಗಳಿಂದ ಅತ್ಯಧಿಕ ಲಾಭ ಪಡೆಯುತ್ತಾರೋ.

❖ ಮತ್ತು ಸರಕಾರಿ ಸಂಪನ್ಮೂಲ ಹಾಗೂ ಸಾಧನಗಳ ಮುಖಾಂತರ, ತಮ್ಮ ಖಾಸಗಿ ಬಂಗಲೆಗಳನ್ನು ನಿರ್ಮಿಸುತ್ತಾರೋ ಹಾಗೂ ಆಸ್ತಿಪಾಸ್ತಿಗಳನ್ನು ಶೇಖರಿಸುತ್ತಾರೋ

ಅಂತಹವರು ತಮ್ಮನ್ನು ವಿಶ್ವಾಸಘಾತುಕ ಎಂದು ಒಪ್ಪಿಕೊಳ್ಳದಿದ್ದರೂ ಮಹಾ ವಂಚನೆ ಮಾಡುತ್ತಿರುತ್ತಾರೆ ಎಂದು ಅನೇಕ ಹದೀಸ್‌ಗಳಿಂದ ತಿಳಿದು ಬರುತ್ತದೆ.

## ದುರ್ಬಲರ ಹಕ್ಕನ್ನು ಕಸಿದುಕೊಳ್ಳುವುದು

ಸಂಪತ್ತಿನ ದುರಾಸೆ ಮನುಷ್ಯನನ್ನು ಕಲ್ಲು ಹೃದಯನನ್ನಾಗಿ ಮಾಡುತ್ತದೆ. ಸಮಾಜದಲ್ಲಿರುವ ದುರ್ಬಲರ ಮೇಲೆ ಕರುಣೆ ತೋರಿಸುವ ಮತ್ತು ಅವರಿಗೆ ನೆರವಾಗುವ ಬದಲು, ದುರ್ಬಲರಿಂದ ತಮಗೆ ಬೇಕಾದಷ್ಟು ಲಾಭ ಪಡೆಯುವಂತಹ ಪರೀಕ್ಷೆಗೆ ಒಳಪಡುತ್ತಾರೆ-ಉಹುದ್ ಯುದ್ಧದ ನಂತರ ಹ.ಸಅದ್ ಬಿನ್ ರಬೀಅ್‌ರ(ರ) ಪತ್ನಿ ತಮ್ಮ ಇಬ್ಬರು ಪುತ್ರಿಯರೊಂದಿಗೆ ಪ್ರವಾದಿ ಮುಹಮ್ಮದ್‌ರಲ್ಲಿ(ಸ) ಬಂದು, ಓ ಅಲ್ಲಾಹನ ಪ್ರವಾದಿವರ್ಯರೇ ಇವರು, ನಿಮ್ಮೊಂದಿಗೆ ಉಹುದ್ ಯುದ್ಧದಲ್ಲಿ ಇದ್ದು ಹುತಾತ್ಮರಾದ ಸಅದ್‌ರ ಪುತ್ರಿಯರು. ಇವರ ಚಿಕ್ಕಪ್ಪ, ಇವರಿಗಾಗಿ ಒಂದು ಜುಬ್ಬವನ್ನು ಕೂಡ ಬಿಡದೆ, ಎಲ್ಲ ಆಸ್ತಿಯನ್ನು ಕಬಳಿಸಿದ್ದಾನೆ. ಇನ್ನು ಯಾರು ತಾನೆ ಈ ಹುಡುಗಿಯರೊಂದಿಗೆ ವಿವಾಹವಾಗಲು ತಯಾರಿರಬಹುದು ಎಂದು ಹೇಳಿದರು. ಈ ಕಾರಣಕ್ಕಾಗಿ ಈ ಕೆಳಗಿನ ಸೂಕ್ತಗಳು ಅವತೀರ್ಣಗೊಂಡವು.

إِنَّ الَّذِينَ يَأْكُلُونَ أَمْوَالَ الْيَتَامَى ظُلْمًا إِنَّمَا يَأْكُلُونَ فِي بُطُونِهِمْ نَارًا وَسَيَصْلَوْنَ سَعِيرًا

"ಅನಾಥರ ಸೊತ್ತನ್ನು ಅಕ್ರಮವಾಗಿ ಕಬಳಿಸುವವರು ವಾಸ್ತವದಲ್ಲಿ ತಮ್ಮ ಹೊಟ್ಟೆಯನ್ನು ನರಕಾಗ್ನಿಯಿಂದ ತುಂಬುತ್ತಾರೆ ಮತ್ತು ನಿಶ್ಚಯವಾಗಿಯೂ ಅವರು ಜ್ವಲಿಸುವ ನರಕಾಗ್ನಿಯಲ್ಲಿ ತಳ್ಳಲ್ಪಡುವರು." (ಪವಿತ್ರ ಕುರ್‌ಆನ್, 4:10)

## ದುರಾಸೆಯ ವಿವಿಧ ಹಿಂಸೆಗಳು

ಮನುಷ್ಯ ಹೃದಯದಲ್ಲಿ ಸಂಪತ್ತಿನ ದುರಾಸೆಯು ಹುಟ್ಟಿಕೊಂಡಾಗ ಸಮಾಜಕ್ಕೆ ಕೇಡು ಉಂಟು ಮಾಡುವ ಅನೇಕ ಪಾಪಗಳನ್ನು ಮಾಡತೊಡಗುತ್ತಾನೆ. ಇದರಿಂದ ಸಮಾಜ ಮಾತ್ರ ಕೆಡುವುದಲ್ಲದೆ, ಆತ ಕೂಡಾ ನಾಶ ಹೊಂದುತ್ತಾನೆ ಮತ್ತು ಶಿಕ್ಷೆಗೆ ಗುರಿಯಾಗುತ್ತಾನೆ.

ಈ ದುರಾಸೆಯ ಕಾರಣ ಅವರು ಕಳ್ಳ ಸಾಗಣೆಯಲ್ಲಿ ತೊಡಗುತ್ತಾರೆ. ನಿಷೇಧಿತ, ಹಾನಿಕಾರಕ ಮತ್ತು ಮಾದಕ ಪದಾರ್ಥಗಳ ಕಳ್ಳಸಾಗಣೆ ಮಾಡುತ್ತಾರೆ. ಸರಕಾರಿ ತೆರಿಗೆಗಳಿಂದ ಪಾರಾಗಲು ಪಿತೂರಿ ನಡೆಸುತ್ತಾರೆ. ತಮ್ಮ ಈ ಹೊಲಸು ವ್ಯಾಪಾರದ ಸಫಲತೆಗಾಗಿ ಅಕ್ರಮ, ಹಿಂಸೆ, ಕೊಲೆಗಳಂತಹ ನೀಚ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಮುಗ್ಧ ಮಕ್ಕಳ ಕೊಲೆ ಮಾಡಿ, ಅವರ ಹೊಟ್ಟೆಗಳನ್ನು ಸೀಳಿ, ಅದರೊಳಗೆ ನಿಷಿದ್ಧ ಪದಾರ್ಥಗಳನ್ನು ಇಟ್ಟು, ಮಕ್ಕಳ ಕಪಟ ತಾಯಂದಿರನ್ನು ಸೃಷ್ಟಿಸಿ, ಮಕ್ಕಳನ್ನು ಬಟ್ಟೆಯಲ್ಲಿ ಸುತ್ತಿ, ರೈಲು, ಹಡಗು ಅಥವಾ ವಿಮಾನ ಮಾರ್ಗದಿಂದ ಮಕ್ಕಳೊಂದಿಗೆ ಪ್ರಯಾಣಿಸುತ್ತಾರೆ. ಈ ರೀತಿ ನಿಷಿದ್ಧ ಪದಾರ್ಥವನ್ನು ಒಂದು ಪ್ರದೇಶ ದಿಂದ ಇನ್ನೊಂಧು ಪ್ರದೇಶಕ್ಕೆ ರವಾನಿಸುತ್ತಾರೆ.

ಈ ದುರಾಸೆಯ ಕಾರಣ ಜನರು ಭಿಕ್ಷಾಟನೆಯಂತಹ ಕ್ರೂರ ಕಸುಬನ್ನು ಅವಲಂಬಿಸುತ್ತಾರೆ. ಮಕ್ಕಳನ್ನು, ದುರ್ಬಲ ವಯಸ್ಕರನ್ನು ಮತ್ತು ಕೆಲವೊಮ್ಮೆ ಮಹಿಳೆಯರನ್ನು ಕೂಡ ಅಪಹರಿಸಿ ಅಂಗವಿಕಲರನ್ನಾಗಿ ಮಾಡಿ, ಅಮಲು ಪದಾರ್ಥ ವ್ಯಸನಿಗಳನ್ನಾಗಿ ಮಾಡಿ ಭಿಕ್ಷಾಟನೆಗೆ ಒಡ್ಡುತ್ತಾರೆ ಮತ್ತು ಇವರ ಸಂಪಾದನೆಯಿಂದ ತಮ್ಮ ದುರಾಸೆಯ ಹೊಂಡವನ್ನು ತುಂಬುತ್ತಾರೆ.

ಇದೇ ದುರಾಸೆಯ ಕಾರಣ ಪರಸ್ಪರ ವಂಚನೆ ಮತ್ತು ಮೋಸದ ಮಾರ್ಗದಿಂದ ಸಂಪತ್ತನ್ನು ಕಬಳಿಸಲಾಗುತ್ತಿದೆ. ಪರಸ್ಪರ ಮಾನಹರಣ ಮಾಡುತ್ತ, ವೈರತ್ವವನ್ನು ಬೆಳೆಸಿ ಜನರ ಪ್ರಾಣವನ್ನು ಬಹಳ ಅಗ್ಗವೆಂದು ಪರಿಗಣಿಸುತ್ತಾರೆ.

ಈ ರೀತಿಯ ಸಂಪತ್ತಿನ ದುರಾಸೆಯಿಂದ ಆಗುವ ದುಷ್ಪರಿಣಾಮದ ಪಟ್ಟಿ ಬಹಳ ಉದ್ದ ಇದೆ. ಆದರೆ ಮನುಷ್ಯನ ಕಣ್ಣಿಗೆ ದುರಾಸೆಯ ಪಟ್ಟಿ ಕಟ್ಟಿರುವುದರಿಂದ ಇದರ ಯಾವುದೇ ಅಂಗ ಮನುಷ್ಯನಿಗೆ ಗೋಚರಿಸುವುದಿಲ್ಲ.

## ಧರ್ಮ ಮತ್ತು ದೇಶದ ಅಪಕೀರ್ತಿ

ಮಾಧ್ಯಮಗಳು ಮತ್ತು ಪತ್ರಿಕೆಗಳ ಪ್ರಗತಿಯ ಕಾರಣ ಪ್ರಪಂಚವು ಇಂದು ಬಹಳ ನಿಕಟವಾಗಿರುವುದರಿಂದ, ಪ್ರಪಂಚದ ಒಂದು ಮೂಲೆಯಲ್ಲಿ ಯಾವುದೇ ತಪ್ಪು ಸಂಭವಿಸಿ ಬಿಟ್ಟರೆ, ಕೆಲವೇ ಕ್ಷಣಗಳಲ್ಲಿ ಇಡೀ ಪ್ರಪಂಚಕ್ಕೆ ತಿಳಿದು ಬಿಡುತ್ತದೆ. ಅಸಂಖ್ಯಾತ ಜನರು ಬೇರೆ ಬೇರೆ ರಾಷ್ಟ್ರಗಳಲ್ಲಿ ಹರಡುತ್ತಿದ್ದಾರೆ ಮತ್ತು ಅವರು ಅಲ್ಲಿ ತಪ್ಪು ಮಾಡಿದರೆ, ಅವರ ಹೆಸರು ಕೆಡುವುದಕ್ಕಿಂತ ಮುಂಚೆ ಆತನ ರಾಷ್ಟ್ರ ಅಪಖ್ಯಾತಿಗೆ ಒಳಗಾಗುತ್ತದೆ.

ಹೀಗೆ ಒಂದು ರಾಷ್ಟ್ರದ ನಿವಾಸಿ ಇನ್ನೊಂದು ರಾಷ್ಟ್ರಕ್ಕೆ ಹೋಗಿ

* ಅನೈತಿಕ ಚಟುವಟಿಕೆಯಲ್ಲಿ ತೊಡಗುತ್ತಾನೆ.
* ಕಳ್ಳಸಾಗಣೆಯ ಆರೋಪದಲ್ಲಿ ಸೆರೆ ಸಿಕ್ಕಿ ಬೀಳುತ್ತಾನೆ.
* ಕಾನೂನು ಬಾಹಿರವಾಗಿ ಇತರ ಪ್ರಾಂತ್ಯವನ್ನು ಪ್ರವೇಶಿಸುತ್ತಾನೆ.
* ಭೌತಿಕ ಲಾಭಕ್ಕಾಗಿ ವಂಚನೆ ಮತ್ತು ಮೋಸ ಮಾಡುತ್ತಾನೆ.
* ಐಷಾರಾಮ ಮತ್ತು ಆಡಂಬರದ ದುರಾಸೆಯಲ್ಲಿ ಅನೈತಿಕ ಚಟುವಟಿಕೆಯಲ್ಲಿ ನಿರತನಾಗುತ್ತಾನೆ.
* ತನ್ನ ಮಾನವನ್ನು ಬಿಟ್ಟು ಭಿಕ್ಷಾಟನೆಯನ್ನು ಪ್ರಾರಂಭಿಸುತ್ತಾನೆ.
* ಮತ್ತು ಒಂದು ಪ್ರಾಂತ್ಯದ ವ್ಯಾಪಾರಿ ಇನ್ನೊಂದು ಪ್ರಾಂತ್ಯದ ವ್ಯಾಪಾರಿಗೆ ಉತ್ತಮ ವಸ್ತು ತೋರಿಸಿ, ವ್ಯಾಪಾರ ಕುದುರಿಸಿಕೊಂಡ ನಂತರ ದೋಷ ಪೂರ್ಣ ವಸ್ತುಗಳನ್ನು ರವಾನಿಸುತ್ತಾನೆ.

ಈ ರೀತಿ ಅಸಭ್ಯ ಕೆಲಸವನ್ನು ಮಾಡಿ, ತನ್ನ ದೇಶಕ್ಕೆ ಅಪಕೀರ್ತಿಯನ್ನು ಒಡ್ಡುತ್ತಾನೆ.

ಹ. ಕಅಬ್ ಬಿನ್ ಅಯಾಝ್(ರ) ಉಲ್ಲೇಖಿಸುತ್ತಾರೆ-

"ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳುವುದನ್ನು ನಾನು ಕೇಳಿದ್ದೇನೆ. ಪ್ರತಿ ಜನಾಂಗಕ್ಕೆ ಒಂದು ಸತ್ವಪರೀಕ್ಷೆ ಇರುತ್ತದೆ ಮತ್ತು ಸಂಪತ್ತು ನನ್ನ ಜನಾಂಗದ ಸತ್ವಪರೀಕ್ಷೆ ಆಗಿದೆ. (ತಿರ್ಮಿದಿ)

# ದುರಾಸೆಯ ಅತಿಕ್ರಮಗಳು

ಮನುಷ್ಯನಿಗೆ ಅಧಿಕಾರ ವ್ಯಾಮೋಹದಲ್ಲಿ ಸಂಭವಿಸುವ ನಷ್ಟವು ಸಂಪತ್ತಿನ ದುರಾಸೆಯಲ್ಲಿ ಸಂಭವಿಸುವ ನಾಶಕ್ಕಿಂತ ಕಡಿಮೆಯೇನೂ ಅಲ್ಲ. ಅರ್ಥಾತ್ ಮನುಷ್ಯನಿಗೆ ಅಧಿಕಾರ, ಪ್ರಭುತ್ವ, ಶಕ್ತಿ ಸಾಮರ್ಥ್ಯ, ಕುರ್ಚಿಗಳ ಮೇಲೆ ಇರುವ ಆಕರ್ಷಣೆ ಮತ್ತು ಮೋಹ, ಮನುಷ್ಯನನ್ನು ಹುಚ್ಚನನ್ನಾಗಿ ಮಾಡಿ ಬಿಡುತ್ತದೆ. ಈ ಹುಚ್ಚುತನದಿಂದಾಗಿ ತನ್ನ ದೇಶ ಮತ್ತು ಜನಾಂಗ ವಿನಾಶದೆಡೆಗೆ ಹೋಗುತ್ತಿರುವುದು ಮತ್ತು ಸ್ವತಃ ತಾನೂ ವಿನಾಶದಲ್ಲಿ ಸಿಲುಕುತ್ತಿರುವುದು ಆತನಿಗೆ ಗೋಚರಿಸುವುದಿಲ್ಲ. ಅರ್ಥಾತ್ ದುರಾಸೆಯ ಕಾರಣ ಆತ ಈ ವಿನಾಶವನ್ನು ನೋಡುವ ಸ್ಥಿತಿಯಲ್ಲಿ ಇರುವುದಿಲ್ಲ.

ದೇಶವು ಸುವ್ಯವಸ್ಥಿತವಾಗಿ ನಡೆಯಬೇಕಾದರೆ, ದೇಶದ ವ್ಯವಸ್ಥೆಯನ್ನು ನೋಡಿ ಕೊಳ್ಳಲು ಜನತೆಯನ್ನು ಸಂಘಟಿಸಿ ಜವಾಬ್ದಾರಿಗಳನ್ನು ಕೊಟ್ಟು ನೇಮಿಸುವುದು ಅತ್ಯಗತ್ಯ. ಆದುದರಿಂದ ಅಧಿಕಾರ ಸಿಕ್ಕಿದಾಗ ಸ್ವೀಕರಿಸುವುದು ತಪ್ಪಲ್ಲ. ಇಲ್ಲಿ ಅಧಿಕಾರ ದಾಹ ತಪ್ಪು ಎಂದು ಹೇಳಲಾಗಿದೆ. ಕಾರಣ, ಅಧಿಕಾರದೊಂದಿಗೆ ಸಿಗುವ ಅಧಿಕಾರದ ಹೊಣೆಗಾರಿಕೆ ಗಳನ್ನು ನೆರವೇರಿಸುವುದು ಸುಲಭ ಸಾಧ್ಯವಲ್ಲ. ಹೀಗಿರುತ್ತ ತನ್ನ ಅಧಿಕಾರ ದಾಹವನ್ನು ನೀಗಿಸಲಿಕ್ಕಾಗಿ, ಆತ ವಿವಿಧ ರೀತಿಯ ಪಿತೂರಿ, ಗಲಭೆ ಮುಂತಾದವುಗಳನ್ನು ಮಾಡಿ ಅಧಿಕಾರ ಪಡೆಯಬಯಸುತ್ತಾನೆ. ಇಂತಹವರಿಗೆ ಬಹುಶಃ ಅಧಿಕಾರ ಹೊಣೆಗಾರಿಕೆಯ ಅರಿವಿಲ್ಲ ಅಥವಾ ಅದನ್ನು ನೆರವೇರಿಸುವ ನಿರ್ಧಾರವಿಲ್ಲ. ಇಂತಹವರು ತನ್ನ ಪ್ರತಿಷ್ಠೆ, ವೈಭವ, ಭೌತಿಕ ಲಾಭಕ್ಕಾಗಿ ಅಧಿಕಾರ ಪಡೆಯ ಬಯಸುವವರು ಎಂಬ ಭಯವಿದೆ. ಈ ನಿಟ್ಟಿನಲ್ಲಿ ಅಧಿಕಾರ ಬಯಸುವವನಿಗೆ ಅಧಿಕಾರ ಕೊಡಬೇಡಿ ಎಂದು ಪ್ರವಾದಿ ಮುಹಮ್ಮದ್‌ರು(ಸ) ಹೇಳಿರುವರು. ಪ್ರವಾದಿ ಮುಹಮ್ಮದ್‌ರು(ಸ) ಹ. ಅಬ್ದುರ್ರಹ್ಮಾನ್ ಬಿನ್ ಸಮ್ರಃರೊಡನೆ(ರ) ಹೀಗೆ ಹೇಳಿರುವರು:

## ಆತ್ಮದ ಗುಲಾಮ

"ಓ ಅಬ್ದುರ್ರಹ್ಮಾನ್(ರ) ಅಧಿಕಾರವನ್ನು ಯಾವತ್ತು ಬೇಡಿ ಪಡೆಯಬೇಡಿ. ಅಧಿಕಾರವನ್ನು ಬೇಡಿ ಪಡೆಯುವವನ್ನು ಅಧಿಕಾರಕ್ಕೆ ಒಪ್ಪಿಸಲಾಗುವುದು ಮತ್ತು ಒಂದು ವೇಳೆ ನೀವು ಅಧಿಕಾರವನ್ನು ಬೇಡದೆ, ಅಧಿಕಾರ ಲಭಿಸಿದರೆ ನಿಮಗೆ (ಅಲ್ಲಾಹನಿಂದ) ಸಹಾಯ ದೊರಕುವುದು." (ತಿರ್ಮಿದಿ)

ಅರ್ಥಾತ್ ಬಯಸದೆ ಸಿಕ್ಕಿದ ಅಧಿಕಾರದ ಜವಾಬ್ದಾರಿಯನ್ನು ಅತ್ಯುತ್ತಮ ರೀತಿಯಲ್ಲಿ ನೆರವೇರಿಸಲು ಬೇಕಾಗಿರುವ ವಿವೇಕ ಮತ್ತು ಸಾಮರ್ಥ್ಯವನ್ನು ಅಲ್ಲಾಹನು ದಯಪಾಲಿಸುವನು, ಮತ್ತು ಆತ ಅದನ್ನು ಉತ್ತಮ ರೀತಿಯಲ್ಲಿ ನೆರವೇರಿಸುವನು. ಆತ ಸಮೃದ್ಧಿ ಮತ್ತು ಜಯವನ್ನು ಸಾಧಿಸುವನು. ಆದರೆ ಅಧಿಕಾರ ದಾಹದಲ್ಲಿ, ಅಧಿಕಾರವನ್ನು ಬೇಡಿ ಪಡೆದ ವ್ಯಕ್ತಿಗೆ, ಅಧಿಕಾರ ಸಿಕ್ಕಿದಾಗ ಅಲ್ಲಾಹನ ಸಹಾಯ ಮತ್ತು ಸಮೃದ್ಧಿ ಪ್ರಾಪ್ತಿ ಆಗಲಾರದು. ಬದಲಾಗಿ ಆತನನ್ನು ಆತನ ಆತ್ಮದ ಗುಲಾಮನನ್ನಾಗಿ ಮಾಡಿ ಬಿಡಲಾಗುವುದು. ಆತನ ದುರಾಸೆ, ಆತನನ್ನು ದಾರಿತಪ್ಪಿಸುವ ಭಯವು ಇರುವುದು.

"ಇದೇ ರೀತಿ ಹ. ಅನಸ್ ಬಿನ್ ಮಾಲಿಕ್(ರ) ವರದಿ ಮಾಡುತ್ತಾರೆ: ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳುವುದನ್ನು ನಾನು ಕೇಳಿದ್ದೇನೆ. ಅಧಿಕಾರವನ್ನು ಬಯಸುವವನು ಮತ್ತು ಅಧಿಕಾರ ಪ್ರಾಪ್ತಿಗಾಗಿ ಸಹಾಯ ಯಾಚಿಸುವವನನ್ನು (ಅಂದರೆ ಜನರಿಂದ ಶಿಫಾರಸು ಮಾಡಿಸುವವನು) ಅದರ ವಶಕ್ಕೆ ಒಪ್ಪಿಸಿ ಬಿಡಲಾಗುವುದು. (ಮತ್ತು ಅಲ್ಲಾಹನು ಸಹಕರಿಸಲಾರನು) ಅಧಿಕಾರವನ್ನು ಬಯಸದಾತನನ್ನು ಮತ್ತು ಅಧಿಕಾರ ಪ್ರಾಪ್ತಿಗಾಗಿ ಯಾರ ಸಹಾಯವನ್ನು ಪಡೆಯದಾತನಿಗೆ (ತಾನು ಇಚ್ಛಿಸದೆ ಪಡೆದ ಅಧಿಕಾರ) ಅಲ್ಲಾಹನು ಒಬ್ಬ ದೇವಚರನನ್ನು ಕಳುಹಿಸಿ ಆತನಿಗೆ ನೇರ ದಾರಿಯಲ್ಲಿ ಸ್ಥಿರವಾಗಿರುವಂತೆ ಸಹಕರಿಸುವನು.(ಆತನಿಂದ ಸರಿಯಾದ ನ್ಯಾಯವನ್ನು ಮಾಡಿಸುವನು)

(ಅಬೂದಾವೂದ್)

## ಅಧಿಕಾರದೊಂದಿಗೆ ನ್ಯಾಯ ಪಾಲಿಸುವುದು

ಹ. ಅಬೂದರ್(ರ) ಉಲ್ಲೇಖಿಸುತ್ತಾರೆ- "ನಾನು ಒಮ್ಮೆ [ಪ್ರವಾದಿ ಮುಹಮ್ಮದ್‌ರೊಡನೆ(ಸ)] ಪ್ರವಾದಿವರ್ಯರೇ(ಸ), ನೀವು ನನಗೆ ಅಧಿಕಾರ ವಹಿಸಿ ಕೊಡಲಾರಿರಾ? ಎಂದು ಪ್ರಶ್ನಿಸಿದೆ. ಇದನ್ನು ಕೇಳಿ ಪ್ರವಾದಿ ಮುಹಮ್ಮದ್‌ರು(ಸ) ತಮ್ಮ ಕೈಯನ್ನು ನನ್ನ ಭುಜದ ಮೇಲೆ ಹೊಡೆದು ಹೇಳಿದರು, ಅಬೂದರ್(ರ)! ನಿಸ್ಸಂಶಯವಾಗಿಯೂ ನೀನು ದುರ್ಬಲನಾಗಿರುವಿ ಮತ್ತು ಇದೊಂದು ಅಮಾನತ್ ಆಗಿದೆ. (ಈ ಅಮಾನತನ್ನು ಹೊತ್ತವರು) ಪುನರುತ್ಥಾನದ ದಿನದಂದು ಅಪಮಾನಿತ ಮತ್ತು ಪಶ್ಚಾತ್ತಾಪಕ್ಕೆ ಒಳಪಡುವರು. ಇದನ್ನು ತನ್ನ ಕರ್ತವ್ಯ ಎಂದು ಭಾವಿಸಿ, ಇದರ ಮುಖಾಂತರ ತಮ್ಮ ಮೇಲೆ ಅನ್ವಯವಾದ ಜವಾಬ್ದಾರಿಗಳನ್ನು ಪೂರೈಸಿದವರ ಹೊರತು." (ಮುಸ್ಲಿಮ್)

ಪ್ರತಿ ಹುದ್ದೆ ಅಮಾನತ್ ಆಗಿದೆ ಎಂದು ಪ್ರವಾದಿ ಮುಹಮ್ಮದ್‌ರ(ಸ) ಈ ಆಜ್ಞೆಯಿಂದ ತಿಳಿದು ಬರುತ್ತದೆ. ತನ್ನಲ್ಲಿ ಈ ಅಮಾನತನ್ನು ನೆರವೇರಿಸುವ ಸಾಮರ್ಥ್ಯ ಇದೆ ಎಂದು ಮನಗಂಡು ಇದನ್ನು ಸ್ವೀಕರಿಸಬೇಕು ಮತ್ತು ಇದರ ಹೊಣೆಗಾರಿಕೆಯನ್ನು ಪೂರೈಸುವ ಸಂಪೂರ್ಣ ಪ್ರಯತ್ನ ಮಾಡಬೇಕು. ಒಂದು ವೇಳೆ ಯಾರಾದರೂ ಈ ಹುದ್ದೆಯ ಹೊಣೆಗಾರಿಕೆಯನ್ನು ಪೂರೈಸಲು ತನ್ನಿಂದ ಸಾಧ್ಯವಿಲ್ಲ ಎಂದು ಭಾವಿಸಿ, ಈ ಹುದ್ದೆಯನ್ನು ಪಡೆದು, ಅದರ ಹೊಣೆಗಾರಿಕೆಯಿಂದ ನುಣುಚಿಕೊಂಡರೆ, ಆತ ವಿಶ್ವಾಸಘಾತಕ

ಎಂದು ಇದರ ಅರ್ಥ ಮತ್ತು ಪುನರುತ್ಥಾನದ ದಿನದಂದು ಆ ಹುದ್ದೆ ಆತನ ಅಪಮಾನಕ್ಕೆ ಮತ್ತು ಪಶ್ಚಾತ್ತಾಪಕ್ಕೆ ಹೇತುವಾಗುವುದು.

ಮುಸ್ಲಿಮ್‌ನಲ್ಲಿ ವರದಿಯಾದ ಇನ್ನೊಂದು ಹದೀಸಿನಲ್ಲಿ ಪ್ರವಾದಿ ಮುಹಮ್ಮದ್‌ರು(ಸ) ಹ. ಅಬೂದರ್‌ರೊಡನೆ ಹೇಳಿದರು:

"ಓ ಅಬೂದರ್! ನೀನು ಬಹಳ ದುರ್ಬಲ ವ್ಯಕ್ತಿ ಎಂದು ನನಗೆ ತಿಳಿದಿದೆ ಮತ್ತು ನನಗೆ ಇಷ್ಟವಾದುದನ್ನು ನಾನು ನಿನಗೆ ಇಷ್ಟಪಡುತ್ತೇನೆ. (ಆದುದರಿಂದ) ನೀನು ಇಬ್ಬರು ವ್ಯಕ್ತಿಗಳ ನಾಯಕತ್ವವನ್ನು ಕೂಡ ಪಡೆಯಬಾರದು ಮತ್ತು ಅನಾಥರ ಸೊತ್ತಿನ ಸಂರಕ್ಷಕನೂ ಆಗಬಾರದು."

ಹುದ್ದೆಯ ಹೊಣೆಗಾರಿಕೆ ಬಹಳ ಕಠಿಣವಾದುದು ಎಂದು ಈ ಹದೀಸಿನ ಮೂಲಕ ಪ್ರವಾದಿ ಮುಹಮ್ಮದ್‌ರು(ಸ) ತಿಳಿಯಪಡಿಸಿದರು. ಹ. ಅಬೂದರ್‌ರನ್ನು(ರ) ಇದರಿಂದ ತಡೆದು ತಮಗೆ(ಸ) ಅವರ ಬಗ್ಗೆ ಇರುವ ಕಾಳಜಿ ಮತ್ತು ಪ್ರೀತಿಯನ್ನು ತೋರ್ಪಡಿಸಿದ್ದಾರೆ. ಇಸ್ಲಾಮಿನಲ್ಲಿ, ಹುದ್ದೆ ಒಂದು ಅಮಾನತ್ ಆಗಿರುವ ಕಾರಣ, ಧರ್ಮದ ತಿರುಳನ್ನು ಅರಿತಿರುವ ನಮ್ಮ ಧಾರ್ಮಿಕ ವಿದ್ವಾಂಸರು, ಹುದ್ದೆಯನ್ನು ಒಂದು ಶಿಕ್ಷೆ ಎಂದು ಬಗೆಯುತ್ತಾ ಅದರಿಂದ ದೂರ ಓಡುತ್ತಾರೆ. ಹ. ಅಬೂದರ್(ರ) ಪ್ರವಾದಿ ಮುಹಮ್ಮದ್ ರೊಡನೆ(ಸ) ಹುದ್ದೆ ಕೇಳಿದಾಗ, ಹುದ್ದೆಯನ್ನು ಬಯಸಬಾರದು ಎಂದು ಅವರಿಗೆ ತಿಳಿದಿರಲಿಕ್ಕಿಲ್ಲ. ಕಾರಣ ಹ. ಅಬೂದರ್(ರ) ತಮ್ಮ ಭಯಭಕ್ತಿಗೆ ಬಹಳ ಹೆಸರುವಾಸಿಯಾದ ವ್ಯಕ್ತಿ. ಹುದ್ದೆಯನ್ನು ಬಯಸುವುದು ಸರಿಯಲ್ಲ ಎಂದು ಅವರು ತಿಳಿದಿರುತ್ತಿದ್ದರೆ, ಅವರು ಯಾವತ್ತು ಈ ರೀತಿ ಪ್ರಶ್ನಿಸುತ್ತಿರಲಿಲ್ಲ.

## ಅಧಿಕಾರ ದಾಹದ ಪರಿಣಾಮ

ಹ. ಅಬೂಹುರೈರ(ರ) ವರದಿ ಮಾಡುತ್ತಾರೆ- "ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು, ಶೀಘ್ರವೇ ನೀವು ಅಧಿಕಾರವನ್ನು ಆಶಿಸುವಿರಿ ಮತ್ತು ನಿಸ್ಸಂಶಯವಾಗಿಯೂ ಇದರ ಪರಿಣಾಮ ಹತಾಶೆ ಮತ್ತು ಪಶ್ಚಾತ್ತಾಪ ಆಗಿರುವುದು. ಕಾರಣ ಅಧಿಕಾರ ಪ್ರಾಪ್ತಿ ಆದಾಗ ಆತನಿಗೆ ಆದ ಸಂತೋಷ, ಅಧಿಕಾರ ಕಸಿಯುವಾಗ ಬೇಸರ ತರುತ್ತದೆ. (ನಸಾಈ)

ಅಧಿಕಾರದಾಹದ ಲೌಕಿಕ ಪರಿಣಾಮ ಹತಾಶೆ ಮತ್ತು ಪಶ್ಚಾತ್ತಾಪ ಆಗಿದೆ. ಕಾರಣ ಅದು ಕಸಿದುಕೊಂಡಾಗ ಆಗುವ ಹತಾಶಾಭಾವ ಮತ್ತು ಕೆಲವೊಮ್ಮೆ ಅಧಿಕಾರಾವಧಿಯಲ್ಲಿ ಮಾಡಿದ ಕೆಟ್ಟ ಕಾರ್ಯಗಳ ದುಷ್ಪರಿಣಾಮ ಲೋಕದಲ್ಲೇ ಸಿಕ್ಕಿ,ಅಪಕೀರ್ತಿಗೆ ಒಳಪಟ್ಟಾಗ, ತನ್ನ ಕೆಟ್ಟ ಕಾರ್ಯಗಳ ಬಗ್ಗೆ ಪಶ್ಚಾತ್ತಾಪ ಉಂಟಾಗುತ್ತದೆ ಮತ್ತು ಅಧಿಕಾರವನ್ನು ಬೇಡಿ ಪಡೆದವರು ಕೆಟ್ಟ ಕಾರ್ಯಗಳನ್ನು ಮಾಡಿಯೇ ತೀರುತ್ತಾರೆ. ಆದುದರಿಂದ ಅವರು ಪುನರುತ್ಥಾನದ ದಿನದಂದು ಕೂಡ ಹತಾಶೆ ಮತ್ತು ಪಶ್ಚಾತ್ತಾಪವನ್ನು ಅನುಭವಿಸಬೇಕಾಗುತ್ತದೆ.

ಅಲ್ಲಾಹನು ತನ್ನ ಪವಿತ್ರ ಗ್ರಂಥದಲ್ಲಿ ಅವಿಧೇಯರಿಗೆ ವಿಧಿಸಲಾಗುವ ಕೆಲವು ಶಿಕ್ಷೆಗಳ ಬಗ್ಗೆ ಹೇಳುತ್ತಾ, ವಿವಿಧ ರೀತಿಯ ಶಿಕ್ಷೆಯ ಬಗ್ಗೆ ಪ್ರಸ್ತಾವಿಸಿದ್ದಾನೆ. ಉದಾಹರಣೆಗೆ,

ವೇದನಾ ಪೂರ್ಣ ಶಿಕ್ಷೆ, ಕಠಿಣ ಶಿಕ್ಷೆ, ಮಹತ್ತರವಾದ ಶಿಕ್ಷೆ, ಶಾಶ್ವತ ಶಿಕ್ಷೆ.

ಈ ಶಿಕ್ಷೆಗಳ ಪೈಕಿ ಇನ್ನೊಂದು ಶಿಕ್ಷೆ 'ಅವಮಾನದ ಶಿಕ್ಷೆ.' ಲೋಕದಲ್ಲಿ ತೋರಿಕೆಯ ಜೀವನ ಜೀವಿಸುವವರು. ಅಂದರೆ ಲೋಕದಲ್ಲಿ ಗೌರವಾನ್ವಿತ ವ್ಯಕ್ತಿ ಎಂಬ ಹೆಸರು ಬಯಸುವವರು ಪುನರುತ್ಥಾನದ ದಿನದಂದು ಅವಮಾನಕರ ಶಿಕ್ಷೆಗೆ ಗುರಿಯಾಗುವಂತಹ ಕಾರ್ಯಗಳಲ್ಲಿ ನಿರತರಾಗುತ್ತಾರೆ.

## ಹುದ್ದೆಯ ಅಪೇಕ್ಷೆ ವಂಚನೆ ಆಗಿದೆ

ಹ. ಅಬೂಮೂಸಾ(ರ) ಹೇಳುತ್ತಾರೆ. "ನಾನೊಮ್ಮೆ ಇಬ್ಬರನ್ನು ಪ್ರವಾದಿ ಮುಹಮ್ಮದ್‌ರ(ಸ) ಬಳಿಗೆ ಕರಕೊಂಡು ಹೋದೆ. ಅದರಲ್ಲಿ ಒಬ್ಬನು ಮೊದಲು ತಶಹ್ಹುದ್ ಪಠಿಸಿದ ನಂತರ, ತಾವು ತಮ್ಮ ರಾಜ್ಯಭಾರದ ಕಾರ್ಯಗಳಿಗಾಗಿ ನಮ್ಮಿಂದ ಸಹಾಯ ಪಡೆಯಬಹುದು ಎಂದು ಹೇಳಲು ನಾವು ಬಂದಿದ್ದೇವೆ ಎಂದು ಹೇಳಿದರು (ನಮಗೆ ಸರಕಾರಿ ಹುದ್ದೆ ಕೊಡಿ) ಎಂದರ್ಥ. ಇನ್ನೊಬ್ಬ ಕೂಡ ಆತನೊಂದಿಗೆ ಧ್ವನಿಗೂಡಿಸಿದ. ಅದಕ್ಕೆ ಪ್ರವಾದಿವರ್ಯರು(ಸ), ಹುದ್ದೆಯನ್ನು ಅಪೇಕ್ಷಿಸುವವನು ನಮ್ಮಲ್ಲಿ ಅತಿ ದೊಡ್ಡ ವಿಶ್ವಾಸಘಾತಕ ಎಂದು ಹೇಳಿದರು. (ತಮ್ಮ ಇಬ್ಬರ ಸಂಗಾತಿಗಳ ಮಾತುಕೇಳಿ) ಹ. ಅಬೂ ಮೂಸಾ(ರ) ಪ್ರವಾದಿವರ್ಯರೊಡನೆ ಕ್ಷಮೆಯಾಚಿಸಿ ಹೇಳಿದರು, ಪ್ರವಾದಿವರ್ಯರೇ ಇವರಿಬ್ಬರು ಬಂದ ಉದ್ದೇಶ ನಮಗೆ ಗೊತ್ತಿರಲಿಲ್ಲ. ಆದರೆ ಪ್ರವಾದಿ ಮುಹಮ್ಮದ್‌ರು(ಸ) ತಮ್ಮ ಕೊನೆಯ ಉಸಿರಿನ ತನಕ ಅವರೀರ್ವರಿಂದ ರಾಜ್ಯಭಾರದಲ್ಲಿ ಯಾವುದೇ ರೀತಿಯ ಸಹಾಯ ಪಡೆಯಲಿಲ್ಲ. (ಅರ್ಥಾತ್ ಯಾವುದೇ ಹುದ್ದೆ ಕೊಡಲಿಲ್ಲ)

(ಅಬೂದಾವೂದ್)

ನಿಮ್ಮಲ್ಲಿ ಹುದ್ದೆಯನ್ನು ಅಪೇಕ್ಷಿಸುವವನು ಅತಿ ದೊಡ್ಡ ವಿಶ್ವಾಸಘಾತಕ ಎಂಬ ಪ್ರವಾದಿ ಮುಹಮ್ಮದ್‌ರ(ಸ) ಮಾತಿನ ತಾತ್ಪರ್ಯವೇನೆಂದರೆ, ಹುದ್ದೆ ಹೊಣೆಗಾರಿಕೆಗಳ ಹೆಸರು ಎಂದಾಗಿದೆ. ಮನುಷ್ಯನ ಮೇಲೆ ಹೊಣೆಗಾರಿಕೆಗಳ ಭಾರ ಬಿದ್ದಾಗ, ಅದನ್ನು ನಿಭಾಯಿಸಲೇಬೇಕು. ಆದುದರಿಂದ ಓರ್ವ ಸಾಮಾನ್ಯ ವ್ಯಕ್ತಿ ಹೊಣೆಗಾರಿಕೆಗಳನ್ನು ಅಪೇಕ್ಷಿಸಲಾದ ಇನ್ನೂ ಹುದ್ದೆಯನ್ನು ಅಪೇಕ್ಷಿಸಿ ಪಡೆಯುವ ವ್ಯಕ್ತಿ, ತನ್ನ ವೈಯಕ್ತಿಕ ಲಾಭಕ್ಕಾಗಿ ಮತ್ತು ಸರಕಾರಿ ಹುದ್ದೆಯಿಂದ ಧರ್ಮ ಬಾಹಿರ ಲಾಭಗಳನ್ನು ಪಡೆಯಲಿಕ್ಕಾಗಿ ಇದನ್ನು ಅಪೇಕ್ಷಿಸುವ ಭಯ ಇದೆ. ಈ ರೀತಿಯ ಲಾಭ ಪಡೆಯುವುದು ವಿಶ್ವಾಸಘಾತಕ ವಾಗಿದೆ ಎಂದು ನೆನಪಿರಲಿ."

## ವಿವೇಚನೆರಾಹಿತ್ಯ

ಸರಕಾರಿ ಹುದ್ದೆಯ ಜವಾಬ್ದಾರಿಯನ್ನು ನಿಭಾಯಿಸುವ ಯೋಗ್ಯತೆ ಆತನಲ್ಲಿದೆಯೇ ಎಂದು ಯೋಚಿಸಲು ಆತನ ದುರಾಸೆ ಆತನನ್ನು ಬಿಡುವುದಿಲ್ಲ. ಇದು ಇನ್ನೊಂದು ದುರಾಸೆಯ ಹಾನಿಕಾರಕ ಮುಖ. ಕುರ್ಚಿಯ ಆಕರ್ಷಣೆ ಆತನನ್ನು ಮೆಲ್ಲಮೆಲ್ಲನೆ ತಪ್ಪುಗಳ ಕಡೆಗೆ ಕೊಂಡು ಹೋಗುತ್ತದೆ. ಆದರೂ ಮನುಷ್ಯನಿಗೆ ತನ್ನ ತಪ್ಪುಗಳು ಗೋಚರಿಸದಿರುವ ಮತ್ತು ತನ್ನ ಅಯೋಗ್ಯತೆಯ ಕಾರಣ, ಧರ್ಮ ಮತ್ತು ಸಮುದಾಯಕ್ಕೆ ಹಾನಿಯನ್ನುಂಟು ಮಾಡುತ್ತಾನೆ. ಈ ಹಾನಿ ಸಮಸ್ತ ಜನ ಸಮುದಾಯಕ್ಕೆ ಗೋಚರಿಸಿದರೂ, ಈತನಿಗೆ ಗೋಚರಿಸುವುದಿಲ್ಲ.

## ಕರ್ತವ್ಯ ಚ್ಯುತಿ

ಪ್ರತಿಷ್ಠೆಯ ದಾಹ ಸಾಮಾನ್ಯವಾಗಿ ಕರ್ತವ್ಯದಿಂದ ವಿಮುಖರನ್ನಾಗಿ ಮಾಡಿ, ಕರ್ತವ್ಯ ಲೋಪದ ಹಾದಿಯನ್ನು ಅಕ್ರಮಿಸುವಂತೆ ಮಾಡುತ್ತದೆ. ಹುದ್ದೆಯ ಹೊಣೆಗಾರಿಕೆಗಳನ್ನು ಜನಸಾಮಾನ್ಯರ ಮುಂದೆ ಪೂರೈಸಿದಾಗ ದರ್ಪ ಮತ್ತು ವೈಭವಕ್ಕೆ ಹೇತುವಾಗುತ್ತದೆ. ಜನಸಾಮಾನ್ಯರ ದೃಷ್ಟಿಗೆ ಬೀಳದಂತೆ ದೂರವಿದ್ದು ಮಿತಿಮೀರಿ ಶ್ರಮಿಸಿ ನೆರವೇರಿಸುವ ಕೆಲಸಗಳು ಇರುತ್ತವೆ. ಈ ರೀತಿ ಮಾಡುವ ಕೆಲಸ ಎಷ್ಟು ಅಗತ್ಯ ಮತ್ತು ಫಲಕಾರಿ ಆದರೂ ಹಿರಿಮೆ, ಪ್ರತಿಷ್ಠೆ ಮತ್ತು ವೈಭವ ಪ್ರದರ್ಶನದ ದಾಹದಿಂದ ಮನುಷ್ಯನಿಗೆ ನೈಜ ಕೆಲಸದಲ್ಲಿ ಆಸಕ್ತಿಯಿರುವುದಿಲ್ಲ.

## ರಾಜಕೀಯ ಹಿರಿಮೆ ಪಡೆಯುವ ಪ್ರಯತ್ನ

ಹಿರಿಮೆಯ ದಾಹ ಯಾವ ರೂಪದಲ್ಲಿದ್ದರೂ ಅದರ ಪರಿಣಾಮ ಕೇಡು. ಆದರೂ ರಾಜಕೀಯ ರಂಗದಲ್ಲಿ ದುರಾಸೆಯು ದೀರ್ಘ ಕಾಲದಿಂದ ದೇಶವನ್ನು ನಷ್ಟ, ಒತ್ತಡ, ವ್ಯಾಕುಲತೆ ಮತ್ತು ಮಾರಣಾಂತಿಕ ಜಂಜಾಟಗಳಲ್ಲಿ ಸಿಲುಕಿಸಿದೆ. ದೇಶವಾಸಿಗಳಲ್ಲಿ ರಾಜಕೀಯ ನೇತಾರರು ಆಗುವ ಆಸಕ್ತಿ ಹೆಚ್ಚುತ್ತಿರುವ ಕಾರಣ, ಅತಿ ಹೆಚ್ಚು ರಾಜಕೀಯ ನೇತಾರರು ಉದ್ಭವಿಸುತ್ತಿದ್ದಾರೆ ಮತ್ತು ಇದುವೇ ವಿಪತ್ತುಗಳಿಗೆ ದಾರಿ ಆಗಿದೆ. ಸಾಮೂಹಿಕ ಜೀವನದ ಇತರ ರಂಗಗಳಲ್ಲೂ ಹಿರಿಮೆ ಸಾಧಿಸಲು, ಲಂಚ ಮತ್ತು ಶಿಫಾರಸುಗಳಿಂದ ಸಹಾಯ ಪಡೆಯಲಾಗುತ್ತದೆ. ಹೋರಾಟದಲ್ಲಿ ಉನ್ನತ ಸ್ಥಾನ ಪಡೆಯಲು ಹಲವಾರು ದಾರಿಗಳನ್ನು ಆಕ್ರಮಿಸಲಾಗುತ್ತದೆ. ಆದರೆ ರಾಜಕೀಯವು ಓರ್ವ ನಿರಕ್ಷರಿ ಕೂಡ ಮಂತ್ರಿ ಆಗುವ ಕನಸು ಕಾಣಬಹುದಾದಂತಹ ರಂಗವಾದುದರಿಂದ ಹಿರಿಮೆಯ ಪ್ರಮತ್ತದಲ್ಲಿ ಅನೇಕಾನೇಕ ಶಿಕ್ಷಿತರು ಮತ್ತು ನಿರಕ್ಷರಿಗಳು, ಬುದ್ಧಿವಂತರು ಮತ್ತು ಮೂರ್ಖರು, ವಿವೇಕಿಗಳು ಮತ್ತು ಅವಿವೇಕಿಗಳನ್ನು ಕಾಣಬಹುದು. ರಾಜಕೀಯ ಎಂಬ ಪದದ ಅರ್ಥ ಕೂಡ ಅರಿಯದವರು, ರಾಜಕೀಯದ ಬಗ್ಗೆ ಕಿಂಚಿತ್ತೂ ಅರಿವಿಲ್ಲದವರು ಕೂಡ ಈ ರಂಗದಲ್ಲಿ ಧುಮುಕುತ್ತಾರೆ.

## ಚುನಾವಣೆಗಳು

ಜನರ ಸಮಸ್ಯೆಗಳನ್ನು ಬಗೆಹರಿಸಲು, ರಾಜಕೀಯ ನೇತಾರರು ಹಲವಾರು ಸ್ವಾರ್ಥ ಉದ್ದೇಶಗಳನ್ನಿಟ್ಟು ರಾಜಕೀಯ ರಂಗವನ್ನು ಪ್ರವೇಶಿಸಿ, ನಾವು ಜನರ ನೈಜ ಹಿತಚಿಂತಕರು, ನಿಮ್ಮ ದುಃಖ ನಮ್ಮ ದುಃಖ ಮತ್ತು ನಿಮ್ಮ ಸಮಸ್ಯೆಗಳ ನಿವಾರಣೆಯೇ ನಮ್ಮ ಗುರಿ ಎಂದು ಸಮಾಜಕ್ಕೆ ಖಾತರಿಪಡಿಸುತ್ತಾರೆ. ಚುನಾವಣೆಯ ಸಮಯ, ಓಟಿಗಾಗಿ, ಇವರ ಔದಾರ್ಯ, ಹಿತಚಿಂತನೆ, ಕಾಳಜಿಗಳೆಲ್ಲವೂ ಹೊರಚಿಮ್ಮುತ್ತದೆ. ಇತರ ಸಾಮಾನ್ಯ ದಿನ ಗಳಲ್ಲಿ ಬಡವರ ದುಃಖ, ನಿರಾಶೆ, ಆತ ರಾತ್ರಿ ಹಸಿದ ಹೊಟ್ಟೆಯಲ್ಲಿ ಮಲಗುತ್ತಾನೆಯೇ ಅಥವಾ ತುಂಬಿದ ಹೊಟ್ಟೆಯಲ್ಲಿ ಮಲಗುತ್ತಾನೆಯೇ, ಜೀವಂತ ಇದ್ದಾನೆಯೇ ಅಥವಾ ಸತ್ತಿದ್ದಾನೆಯೇ ಎಂಬ ಪರಿವೆ ಈ ಹಿತಚಿಂತಕರಿಗೆ ಇರುವುದಿಲ್ಲ. ಆದರೆ ಚುನಾವಣಾ ಚಟುವಟಿಕೆಗಳು ಪ್ರಾರಂಭಗೊಂಡಂತೆ, ಬಡವರ ಕೇರಿಗಳಲ್ಲಿ ಇವರ ಔದಾರ್ಯ ಹರಿಯತೊಡಗುತ್ತದೆ.

ಸಾಮಾನ್ಯವಾಗಿ ರಾಜಕೀಯ ರಂಗದಲ್ಲಿ ಹುದ್ದೆ ಮತ್ತು ಅಧಿಕಾರ ಪಡೆಯುವ ಸುಲಭದ ಮಾರ್ಗ ಚುನಾವಣೆಗಳಾಗಿರುವುದರಿಂದ, ಗದ್ದುಗೆಯ ದಾಹವುಳ್ಳವರು ಇದರಿಂದ ಆಕರ್ಷಿತರಾಗುತ್ತಾರೆ.

ಕೆಲವು ಕುಟುಂಬಗಳಲ್ಲಿ, ಚುನಾವಣೆಗಳಲ್ಲಿ ನಿಲ್ಲುವುದು ಕೌಟುಂಬಿಕ ವೃತ್ತಿ. ಆದುದರಿಂದ ಅವರು ಪಿತ್ರಾರ್ಜಿತ ಆಸ್ತಿಯನ್ನು ಗಳಿಸುವಂತಹ ಭಾವನೆಯೊಂದಿಗೆ ಅದಕ್ಕಾಗಿ ಶ್ರಮಿಸುತ್ತಾರೆ.

ಕೆಲವರಿಗೆ ತಮ್ಮ ವಿಶಾಲ ಜಾಗೀರು, ವ್ಯಾಪಾರ, ವಾಣಿಜ್ಯ ಮುಂತಾದವುಗಳ ಭದ್ರತೆಯ ಮಾರ್ಗ, ಅಧಿಕಾರದಿಂದ ಎಂದು ಕಂಡು ಬರುವುದರಿಂದ, ಅವರು ರಾಜಕೀಯವನ್ನು ಪ್ರವೇಶಿಸುತ್ತಾರೆ. ಇಲ್ಲದಿದ್ದರೆ ಅವರ ಅಧೀನದಲ್ಲಿದ್ದವರು ಕೂಡ ಅವರನ್ನು ಗೌರವಿಸಲಾರರು ಎಂಬ ಭಾವನೆ ಅವರಲ್ಲಿರುತ್ತದೆ.

ಕೆಲವರಿಗೆ ಅಸೆಂಬ್ಲಿ, ಪಾರ್ಲಿಮೆಂಟ್‌ಗಳ ಬಗ್ಗೆ ಮತ್ತು ಆ ಹುದ್ದೆಯ ಕರ್ತವ್ಯದ ಬಗ್ಗೆ ಜ್ಞಾನವಿಲ್ಲದಿದ್ದರೂ ತಮ್ಮ ಎದುರಾಳಿಗಳನ್ನು ಎಲ್ಲ ರಂಗಗಳಲ್ಲಿ ಸೋಲಿಸಿದಂತೆ, ಈ ರಂಗದಲ್ಲಿ ಸೋಲಿಸಲಿಕ್ಕಾಗಿ ಚುನಾವಣೆಯಲ್ಲಿ ಭಾಗವಹಿಸುತ್ತಾರೆ.

ಕೆಲವರಿಗೆ ತಾವು ಹಾದು ಹೋದಲ್ಲಿಂದ ಜನರು ತಮ್ಮನ್ನು ನಿಬ್ಬೆರಗಾಗಿ ನೋಡಬೇಕು. ತಮ್ಮ ದೊಡ್ಡಸ್ತಿಕೆಯನ್ನು ಕಂಡು ದಿಗ್ಭ್ರಮೆಗೊಳ್ಳಬೇಕು. ಹಾರಗಳನ್ನು ಹಾಕಬೇಕು ಎಂಬ ಅಭಿಲಾಷೆ ಇರುತ್ತದೆ. ಇಂತಹವರಿಗೆ ಜನಸಾಮಾನ್ಯರ ಸಮಸ್ಯೆಗಳ ಬಗ್ಗೆ ಕಿಂಚಿತ್ ಜ್ಞಾನ ಇಲ್ಲದಿದ್ದರೂ ಸರಿ, ಜನರ ಸಮಸ್ಯೆಗಳನ್ನು ಬಗೆಹರಿಸುವ ಅಭಿರುಚಿ ಇಲ್ಲದಿದ್ದರೂ ಸರಿ, ಅವರು ಒಂದು ಕ್ಷೇತ್ರದ ಪ್ರತಿನಿಧಿಯಾಗಿ ಚುನಾವಣೆಗೆ ನಿಲ್ಲುತ್ತಾರೆ.

ಇದೇ ರೀತಿ ಇನ್ನು ಕೆಲವರಿಗೆ ಚುನಾವಣೆಯಲ್ಲಿ ನಿಲ್ಲುವುದೆಂದರೆ ಸ್ವಾರಸ್ಯಕರ ಚಟ. ಅವರು ಚುನಾವಣೆಗಳಲ್ಲಿ ಪ್ರತಿ ಸಲ ಸೋತರೂ ಚಿಂತಿಲ್ಲ, ಈ ಚಟಕ್ಕಾಗಿ ಚುನಾವಣೆಯಲ್ಲಿ ಭಾಗವಹಿಸುತ್ತಾರೆ.

ಇನ್ನು ಕೆಲವರಿಗೆ ಚುನಾವಣೆ ಒಂದು ವ್ಯಾಪಾರ. ಅವರ ನೈಜ ಉದ್ದೇಶ. ಅಧಿಕಾರದ ಮುಖಾಂತರ ಸಂಪತ್ತು ಗಳಿಸುವುದು. ಇದಕ್ಕಾಗಿ ಅವರು ಹಣವನ್ನು ನೀರಿನಂತೆ ಖರ್ಚು ಮಾಡಲು ಸಿದ್ಧರಿರುತ್ತಾರೆ. ಕಾರಣ ಲಕ್ಷಗಟ್ಟಲೆ ಖರ್ಚು ಮಾಡಿ ಅವರು ಅಪೇಕ್ಷಿಸುವ ಹುದ್ದೆ ಸಿಕ್ಕಿದರೆ, ಕೋಟಿಗಟ್ಟಲೆ ಹಣ ಗಿಟ್ಟಿಸಬಹುದು. ಆದುದರಿಂದ ಇದು ಲಾಭದಾಯಕ ವ್ಯಾಪಾರ.

ಜನಸಾಮಾನ್ಯರಿಗೆ ಈ ಕಪಟ ನಾಯಕರ ಒಳಸಂಚುಗಳಾದ ಕೌಟುಂಬಿಕ ವೃತ್ತಿ, ವ್ಯಾಪಾರದ ರಕ್ಷಣೆ, ತಮ್ಮ ಎದುರಾಳಿಯ ಸೋಲು ಅಥವಾ ಜನಸಾಮಾನ್ಯರ ಮಧ್ಯೆ ದೊಡ್ಡಸ್ತಿಕೆ ಪ್ರದರ್ಶನ. ತಮ್ಮ ಚಟ ಪೂರೈಸುವುದು ಅಥವಾ ಸಂಪತ್ತು ಗಿಟ್ಟಿಸುವುದು ಎಂಬ ವಿಷಯ ತಿಳಿದರೆ ವೋಟು ಗಳಿಸುವುದು ಹೇಗೆ? ಇವರಲ್ಲಿ ಜನಸಾಮಾನ್ಯರ ಮನವೊಲಿಸು ವಂತಹ ಗುಣವಿಶೇಷತೆ ಕಂಡು ಬರುವುದಿಲ್ಲ. ಆದುದರಿಂದ, ಅವರು ಅಧಿಕಾರ ಎಂಬುದು ಈ ಮುಳ್ಳು ಹಾದಿಯಲ್ಲಿ ನಾವು ಕೇವಲ ನಿಮಗಾಗಿ, ನಿಮ್ಮ ಸಮಸ್ಯೆಗಳನ್ನು ಬಗೆಹರಿಸಲಿಕ್ಕಾಗಿ, ನಿಮ್ಮ ಚಿಂತೆ ನಮ್ಮನ್ನು ಕಾಡುತ್ತಿದೆ ಎಂದು ಜನಸಾಮಾನ್ಯರಿಗೆ ತೋರ್ಪಡಿಸುತ್ತಾರೆ.

## ಪಕ್ಷಪಾತಗಳನ್ನು ಹರಡಿಸುವುದು

ಅಭ್ಯರ್ಥಿಗಳು ತಮ್ಮ ಬೇಳೆ ಬೇಯಿಸಲಿಕ್ಕಾಗಿ ಜನಸಾಮಾನ್ಯರಲ್ಲಿ ಇಸ್ಲಾಮಿನ ಬಗ್ಗೆ ಅಜ್ಞಾನ ಅಪನಂಬಿಕೆಗಳನ್ನು ಹರಡಿ, ಜನರನ್ನು ಗುಂಪುಗಳಲ್ಲಿ ವಿಂಗಡಿಸುವ ಹಾನಿಕಾರಕ ಕೆಲಸ ಮಾಡುತ್ತಾರೆ. ಗುಂಪುಗಳಲ್ಲಿ ಜಗಳವನ್ನುಂಟು ಮಾಡಿ ಜನಾಂಗದ ಏಕತೆಯನ್ನು ಒಡೆಯುವ ಕೆಲಸ ಮಾಡುತ್ತಾರೆ. ಸ್ಥಾನೀಯ ಭಾಷೆಗಳನ್ನು ಸಮಸ್ಯೆಗಳನ್ನಾಗಿ ಮಾಡಿ ಎತ್ತಿ ಹಿಡಿಯುವುದು, ಪ್ರಾಂತೀಯ ಪಕ್ಷಪಾತ ಹರಡಿಸುವುದು, ಜಾತಿ, ಧರ್ಮ, ಮತ, ಪಂಗಡಗಳ ಹೆಸರಲ್ಲಿ ಜನರನ್ನು ವಿಂಗಡಿಸಿ ಜಗಳ ಮಾಡಿಸುವುದು ಇವರ ನೆಚ್ಚಿನ ಕೆಲಸ. ಒಂದು ಕಡೆ ಇಸ್ಲಾಮಿನ ಪ್ರಶಂಸೆ ಮತ್ತು ಇನ್ನೊಂದು ಕಡೆ ಇಸ್ಲಾಮಿಗೆ ವಿರುದ್ಧವಾದ ಕುಟಿಲತೆಗಳನ್ನುಪಯೋಗಿಸಲಾಗುತ್ತದೆ.

## ಆತ್ಮ ಪ್ರಶಂಸೆ

ಚುನಾವಣಾ ಸಮಯದಲ್ಲಿ ನೋಡಲು ಸಿಗುವ ಇನ್ನೊಂದು ವಿಷಾದಕರ ಅಂಶ, ಅಭ್ಯರ್ಥಿಗಳ ಆತ್ಮಸ್ತುತಿ. ತಮ್ಮನ್ನು ಸ್ವಯಂ ಪ್ರಶಂಸಿಸುತ್ತಾ ಇತರಿಂದಲೂ ಪ್ರಶಂಸಿಸುವಂತೆ ಹೇಳಲಾಗುತ್ತದೆ. ತಮ್ಮ ಯೋಗ್ಯತೆ, ಗುಣವಿಶೇಷತೆ, ಅರ್ಹತೆ ಮತ್ತು ಜನಕಲ್ಯಾಣದ ಕೆಲಸಗಳು ಮಾತ್ರವಲ್ಲ. ತಮ್ಮ ಆರಾಧನೆಗಳನ್ನು ಕೂಡ ಜನಸಾಮಾನ್ಯರ ಮುಂದೆ ಪ್ರಶಂಸಿಸಲಾಗುತ್ತದೆ. ಇವರ ಆರಾಧನೆ ಮತ್ತು ಉತ್ತಮ ಕರ್ಮಗಳು ಸೃಷ್ಟಿಕರ್ತನಿಗಾಗಿ ಇರದೆ, ಚುನಾವಣೆಯಲ್ಲಿ ಗೆಲುವು ಸಾಧಿಸಲಿಕ್ಕಾಗಿರುತ್ತದೆ. ಆದಾಗ್ಯೂ ಇವರ ಸದ್ಗುಣ ಮತ್ತು ಆರಾಧನೆಗಳು ಆಡಂಬರ ಮತ್ತು ಪ್ರದರ್ಶನಗಳಿಂದ ಮುಕ್ತವಾಗಿದ್ದು,

ಆತ್ಮಶುದ್ಧಿಗಾಗಿರುತ್ತಿದ್ದರೆ, ಲೋಕ ಮತ್ತು ಪರಲೋಕದಲ್ಲಿ ವಿಜಯಿಗಳಾಗುತ್ತಿದ್ದರು ಮತ್ತು ಅತಿ ಹೆಚ್ಚು ಪ್ರಶಂಸೆಗೆ ಪಾತ್ರರಾಗುತ್ತಿದ್ದರು.

## ಸುಳ್ಳು ವಾಗ್ದಾನಗಳು

ಜನಸಾಮಾನ್ಯರೊಡನೆ ಅನೇಕ ದೊಡ್ಡ ದೊಡ್ಡ ವಾಗ್ದಾನಗಳನ್ನು ಮಾಡಲಾಗುತ್ತಿದೆ. ಅದರಲ್ಲಿ ಅನೇಕ ವಾಗ್ದಾನಗಳನ್ನು ನೆರವೇರಿಸಲು ಸಾಧ್ಯವಿಲ್ಲ ಎಂದು ಅವರಿಗೆ ಸ್ವತಃ ತಿಳಿದಿರುತ್ತದೆ. ಆದರೆ ಸಮಯದ ಬೇಡಿಕೆ ಅವರಿಂದ ಈ ವಾಗ್ದಾನಗಳನ್ನು ಮಾಡಿಸುತ್ತದೆ. ಚುನಾವಣೆಯಲ್ಲಿ ಸೋತರೆ ವಾಗ್ದಾನಗಳು ತನ್ನಿಂತಾನೆ ಮುರಿದು ಬಿಡುತ್ತದೆ. ಗೆದ್ದರೆ! ಗೆಲುವಿನ ಉನ್ನತ ಸ್ಥಾನಕ್ಕೆ ಏರಲು ಬಳಸಲಾದ ವಾಗ್ದಾನಗಳ ಮೆಟ್ಟಿಲುಗಳ ಅಗತ್ಯ ಇರುವುದರಿಂದ, ಅದನ್ನು ಮುರಿಯುವುದು ದೊಡ್ಡ ವಿಷಯವಾಗುವುದಿಲ್ಲ. ಗೆದ್ದು ಉನ್ನತ ಸ್ಥಾನಕ್ಕೆ ಏರಿದ ನಂತರ ಅವರಿಗೆ ಮೆಟ್ಟಿಲುಗಳ ಬಗ್ಗೆ ಚಿಂತಿಸುವ ಅಗತ್ಯ ಕಂಡು ಬರುವುದಿಲ್ಲ. ಗೆದ್ದ ನಂತರ ತಮ್ಮ ವಾಗ್ದಾನಗಳನ್ನು ಮುರಿದರೆ, ಜನಸಾಮಾನ್ಯರು ಏನು ಮಾಡಲು ಸಾಧ್ಯ! ಇನ್ನು 4-5 ವರ್ಷಗಳ ತನಕ ನಿಶ್ಚಿಂತೆಯ ಜೀವನ ಸಾಗಿಸಿದರೆ ಆಯಿತು. ಅಗತ್ಯ ಬಿದ್ದಾಗ ನೋಡೋಣ ಎಂದು ನಿರ್ಲಿಪ್ತತೆಯಿಂದ ಜೀವಿಸುತ್ತಾರೆ.

ಜನರು ಯಾವ ಸಂಕಲ್ಪದೊಂದಿಗೆ ಕೆಲಸ ಮಾಡುತ್ತಾರೆ ಎಂದು ಹೇಳುವುದು ಕಷ್ಟ. ಇವರಲ್ಲಿ ಜನಸಾಮಾನ್ಯರ ನೈಜ ಹಿತಚಿಂತಕರು ಯಾರು ಮತ್ತು ಅವರ ಸಮಸ್ಯೆಗಳನ್ನು ಸ್ಪಂದಿಸಲಿಕ್ಕಾಗಿ ಶ್ರಮಿಸುವವರು ಯಾರು ಮತ್ತು ಕೇವಲ ತಮ್ಮ ಹಿರಿಮೆಯ ಉದ್ದೇಶವನ್ನು ಇಟ್ಟುಕೊಂಡು ಅಭ್ಯರ್ಥಿಗಳಾಗ ಬಯಸುವವರು ಯಾರು ಎಂದು ಹೇಳುವುದು ಅಸಾಧ್ಯ. ಆದರೆ ಈ ಅಭ್ಯರ್ಥಿಗಳ ಪರಿಶ್ರಮವನ್ನು ನೋಡಿದರೆ ಇವರು ನೈಜ ಸಮಾಜ ಸೇವಕರೇ, ಎಂದು ಓರ್ವ ಸಾಮಾನ್ಯ ಮನುಷ್ಯ ಕೂಡ ಯೋಚಿಸಬಹುದು. ಆದರೆ ಇವರಲ್ಲಿ ನೈಜ ಸಮಾಜ ಸುಧಾರಕರು ಬೆರಳೆಣಿಕೆಯಷ್ಟು ಮಾತ್ರ ಇರಲು ಸಾಧ್ಯ.

## ವಿದ್ರೋಹ

ಕೊನೆಯಲ್ಲಿ ದುರಾಸೆಯನ್ನು ಉತ್ತೇಜಿಸುವ ಇನ್ನೊಂದು ಕೆಟ್ಟ ವಿಷಯ ಸಂಪತ್ತಿನ ದುರಾಸೆ. ಇವೆಲ್ಲ ತನ್ನ ದೇಶ ಮತ್ತು ದೇಶವಾಸಿಗಳೊಂದಿಗೆ ಮಾಡುವ ವಿದ್ರೋಹ. ತನ್ನ ಚಿತ್ತದ ಆರಾಧನೆ, ಸಂಪತ್ತು ಮತ್ತು ಹಿರಿಮೆಯ ದುರಾಸೆಯಲ್ಲಿ ತನ್ನ ದೇಶ ಮತ್ತು ದೇಶವಾಸಿಗಳ ಮೇಲೆ ಹೇರಿದ ಗುಲಾಮಗಿರಿ ಮತ್ತು ವೈರಿಗಳೊಂದಿಗೆ ಸೇರಿ ಸುರಿಸಿದ ಹಿಂಸೆಗಳ ಸರಮಾಲೆಗಳಿಂದ ಮನುಷ್ಯನ ಇತಿಹಾಸ ತುಂಬಿದೆ. ಕೇವಲ ಸ್ವಂತ ಲಾಭಕ್ಕಾಗಿ, ಆಗರ್ಭ ಶ್ರೀಮಂತನಾಗಬೇಕೆಂಬ ಸ್ವಾರ್ಥ ಸಾಧಿಸಲಿಕ್ಕಾಗಿ, ಮನುಷ್ಯ ಅನ್ಯರ ಸಹಾಯದಿಂದ ಕೆಟ್ಟ ಮತ್ತು ನೀಚ ಅಧಿಕಾರವನ್ನು ಪಡೆಯಲು ತನ್ನ ಸಮುದಾಯದ ಲಕ್ಷಗಟ್ಟಲೆ, ಕೋಟಿಗಟ್ಟಲೆ ಮನುಷ್ಯರನ್ನು ಮತ್ತು ಮುಂಬರುವ ಹೊಸ ಪೀಳಿಗೆಯನ್ನು ಕೂಡ ಗುಲಾಮಗಿರಿಗೆ ತಳ್ಳುತ್ತಾರೆ. ಇದು ಅವರ ನಿರ್ದಯೆ, ನೀಚತನ ಮತ್ತು ಅವಿವೇಕತನದ

ಅತ್ಯಂತ ನೀಚ ಮಟ್ಟ. ಓರ್ವ ದೇಶದ್ರೋಹಿ ತನ್ನ ಸಮುದಾಯದ ಕೋಟಿಗಟ್ಟಲೆ ಜನರ ಮೇಲೆ ಹಿಂಸೆ ಅವಮಾನಗಳ ಸರಮಾಲೆಯನ್ನು ಎಸಗಿ, ಆತ ಶ್ರೀಮಂತನಾಗುವುದು ಅಥವಾ ಅಧಿಕಾರವನ್ನು ಪಡೆಯುವುದು ಯಾವ ಮಹತ್ವವನ್ನು ಪಡೆದುಕೊಳ್ಳುತ್ತದೆ. ಲೋಭಿಯ ಕಣ್ಣುಗಳು ದುರಾಸೆಯ ಪಟ್ಟಿಯಿಂದ ಕಟ್ಟಿರುವುದರಿಂದ ಆತ ನೈಜ ಸ್ಥಿತಿಯನ್ನು ನೋಡುವ ಸ್ಥಿತಿಯಲ್ಲಿ ಇರುವುದಿಲ್ಲ.

ಮನುಷ್ಯ ವೈಶಿಷ್ಟ್ಯಗಳಲ್ಲಿ ಒಂದು ವೈಶಿಷ್ಟ್ಯ ಏನೆಂದರೆ, ಆತ ಇತರರ ಮೇಲೆ ಆಗುವ ದುಷ್ಪರಿಣಾಮಗಳನ್ನು ನೋಡಿ ಪಾಠ ಕಲಿಯದಿರುವುದು. ಪಾಠ ಕಲಿತಿದ್ದರೆ ಯಾವನೇ ವಿದ್ರೋಹಿ, ತಾನು ಸ್ವತಃ ವಿನಾಶದ ಕಡೆ ಹೋಗುತ್ತಿರುವ ಬಗ್ಗೆ ಅರಿಯದೆ ಇರುತ್ತಿರಲಿಲ್ಲ. ದ್ರೋಹದ ಪರಿಣಾಮ ಭಯಾನಕವಾಗಿದೆ ಎಂದು ಇತಿಹಾಸ ಸಾಕ್ಷ್ಯ ವಹಿಸುತ್ತದೆ. ಆತ ಜನಸಾಮಾನ್ಯರ ಕ್ರೋಧಕ್ಕೆ ಬಲಿಯಾಗುತ್ತಾನೆ, ಅಥವಾ ಸಮುದಾಯದ ವೈರಿಗಳೊಂದಿಗೆ ಕೈ ಜೋಡಿಸಿದುದರ ಪರಿಣಾಮ, ಅವರ ಕೆಲಸ ಮುಗಿದೊಡನೆ, ಆತನನ್ನು ಮುಗಿಸಿ ಬಿಡಲಾಗುತ್ತದೆ. ದ್ರೋಹದಿಂದ ಗಳಿಸಲಾದ ಅಲ್ಪಸ್ವಲ್ಪ ಸಂಪತ್ತು ಮತ್ತು ಅಧಿಕಾರದಿಂದ ಆತನಿಗೆ ಗೌರವ, ಮರ್ಯಾದೆ, ನೆಮ್ಮದಿ ಮುಂತಾದವುಗಳು ಪ್ರಾಪ್ತಿ ಆಗದು. ವಾಸ್ತವದಲ್ಲಿ ಆತ ಅಪಮಾನಕ್ಕೆ ಒಳಗಾಗುತ್ತಾನೆ ಮತ್ತು ಶಪಿಸಲ್ಪಡುತ್ತಾನೆ ಹಾಗೂ ಈ ಹತಭಾಗಿತನ, ಆತ ಸತ್ತರೂ ಶತಶತಮಾನಗಳ ವರೆಗೆ ಆತನನ್ನು ಹಿಂಬಾಲಿಸುತ್ತಿರುತ್ತದೆ.

ದುರಾಸೆಯ ಪರಿಣಾಮ ವಿನಾಶ ಎಂಬುದರಲ್ಲಿ ಎರಡು ಮಾತಿಲ್ಲ. ದುರಾಸೆಯ ಸಂದರ್ಭ ಮನುಷ್ಯನ ಕುರುಡುತನ ಮನುಷ್ಯನನ್ನು ನಾಶ ಮಾಡುತ್ತದೆ. ದುರಾಸೆ ಮನುಷ್ಯನ ಪಾರಲೌಕಿಕ ಜೀವನದೊಂದಿಗೆ ಲೌಕಿಕ ಜೀವನವನ್ನೂ ಸಹ ನಾಶ ಮಾಡುತ್ತದೆ. ಆದರೆ ಮನುಷ್ಯ, ತನ್ನ ಲೌಕಿಕ ಜೀವನವನ್ನು ಭದ್ರಪಡಿಸುತ್ತಿದ್ದೇನೆ ಎಂಬ ಭ್ರಮೆಯಲ್ಲಿ ಜೀವಿಸುತ್ತಾನೆ. ಒಂದು ವೇಳೆ ಮನುಷ್ಯನ ಈ ಭ್ರಮೆ ನಿಜವೆಂದಾದರೂ, ಇದು ನಷ್ಟದ ವ್ಯಾಪಾರವಾಗಿರುವುದು. ಕಾರಣ ಮನುಷ್ಯನ ದುರಾಸೆ, ಮನುಷ್ಯನ ಪರಲೋಕ ಜೀವನವನ್ನು ಹಾಳು ಮಾಡುವಂತಹ ಕೆಲಸಗಳನ್ನು ಮಾಡುವಂತೆ ಪ್ರೇರೇಪಿಸುತ್ತದೆ. ಕೆಲವೊಂದು ಅಪವಾದವಿರಬಹುದು.

ಹ. ಅಬೂ ಉಮಾಮ(ರ) ವರದಿ ಮಾಡುತ್ತಾರೆ:

"ಪ್ರವಾದಿ ಮುಹಮ್ಮದ್‌ರು(ಸ) ಹೇಳಿದರು- ತನ್ನ ಲೌಕಿಕ ಜೀವನಕ್ಕಾಗಿ, ತನ್ನ ಪಾರಲೌಕಿಕ ಜೀವನವನ್ನು ಹಾಳು ಮಾಡಿದವನು, ಪುನರುತ್ಥಾನದ ದಿನದಂದು ಅಲ್ಲಾಹನ ಬಳಿ ಅತ್ಯಂತ ಕೆಟ್ಟವನಾಗಿರುವನು. (ಇಬ್ನುಮಾಜಃ)

